# ನಿಮ್ಮ ಕುಟುಂಬದ ಭವಿಷ್ಯವನ್ನು ಇಂದು ನೀವು ರೂಪಿಸಲೇ ಬೇಕು!



ಕುಟುಂಬದ ಹೊಣೆ ಹೊತ್ತ ನೀವು ನಿಮ್ಮ ಕುಟುಂಬದ ಉಜ್ವಲ ಭವಿಷ್ಯಕ್ಕೆ ಭದ್ರ ತಳಹದಿಯನ್ನು ಇಂದು ಹಾಕಲೇಬೇಕು! ಮಕ್ಕಳ ವಿದ್ಯಾಭ್ಯಾಸ, ಮದುವೆ, ಮನೆಕಟ್ಟಲು ಸಾಕಾಗುವಷ್ಟು ಹಣ ನಿಮ್ಮಲ್ಲಿದೆ ಎಂದಾಗ ಅದು ಸುಭದ್ರ ಭವಿಷ್ಯದ ಮುನ್ಸೂಚನೆ ! ! ಅಗತ್ಯವಿದ್ದಾಗ ನಿಮಗೆ ಸಹಕಾರಿಯಾಗಲು **ಕೆನರಾ ಬ್ಯಾಂಕ್** ನಿಮ್ಮ ಜೊತೆಗಿದೆ !!!

ನೀವು ಸಂಬಳ ಪಡೆಯುವವರಾಗಿದ್ದು ಪ್ರತಿ ತಿಂಗಳು ಒಂದು ನಿರ್ದಿಷ್ಟ ಮೊಬಲಗನ್ನು ಉಳಿಸಬಹುದಾದಲ್ಲಿ, ನಿಮ್ಮ ಅನುಕೂಲತೆಗೆ ನಮ್ಮ **ರಿಕರಿಂಗ್ ಠೇವಣಿ** ಯೋಜನೆ ಇದೆ

ನಿಮ್ಮ ಮಕ್ಕಳ ವಿದ್ಯಾಭ್ಯಾಸದ ಉಸ್ತುವಾರಿ ವಹಿಸಿಕೊಳ್ಳಬೇಕಾದಲ್ಲಿ ನಿಮ್ಮ ಮಕ್ಕಳೊಂದಿಗೇ ಬೆಳೆದು ನಿಲ್ಲುವ ನಮ್ಮ **ವಿದ್ಯಾನಿಧಿ ಠೇವಣಿ** ಯೋಜನೆ ಸಹಕಾರಿಯಾಗುತ್ತದೆ!

ಅಸಲು ಭದ್ರವಾಗಿರುವುದರ ಜೊತೆಗೆ ಕೆಲವು ವರ್ಷಗಳ ನಂತರ ಪ್ರತಿ ತಿಂಗಳು ನಿಮಗೆ ಆದಾಯವನ್ನು ತರುವ ನಮ್ಮ **ನಿರಂತರ ಠೇವಣಿ** ಯೋಜನೆಯು ನಿಮ್ಮ ನಿವೃತ್ತಿ ಜೀವನ ಸುಗಮವಾಗುವಂತೆ ಮಾಡುತ್ತದೆ.

ನಿಮ್ಮ ಅನುಕೂಲತೆಗಳಿಗನುಸಾರವಾಗಿ ಯಾವುದೇ ಠೇವಣಿ ಯೋಜನೆ ಯೋಜನೆಗಳನ್ನು ಆಯ್ದುಕೊಳ್ಳಿ.

ನಮ್ಮ ಇತರ ಠೇವಣಿ ಯೋಜನೆಗಳು—
**ಕಾಮಧೇನು, ನಿರಖು, ಸೇವಿಂಗ್ಸ್ ಬ್ಯಾಂಕ್**
ಇಂದೇ ನಮ್ಮ ಯಾವುದೇ ಶಾಖೆಗೆ ಭೇಟಿ ಕೊಡಿ.

**ಕೆನರಾ ಬ್ಯಾಂಕ್**




(ಒಂದು ರಾಷ್ಟ್ರೀಕೃತ ಬ್ಯಾಂಕ್)

**ರಾಷ್ಟ್ರದಾದ್ಯಂತ 1,300 ಕ್ಕೂ ಹೆಚ್ಚು ಶಾಖೆಗಳು**

maa (S) CB 14 c Kan 81

# ನಾಳೆಗಾಗಿ ಬುನಾದಿಯಾದ ೨ ವರ್ಷಗಳು, ಕಳೆದ ೨ ವರ್ಷಗಳಲ್ಲಿ ಕ್ರಿಯಾಶೀಲ ನಾಯಕತ್ವದಲ್ಲಿ ಕರ್ನಾಟಕ ಸರ್ಕಾರದ ಮುನ್ನಡೆ

ಶ್ರೀ ಆರ್.ಗುಂಡೂರಾವ ಅವರ ನೇತೃತ್ವದ ಸರ್ಕಾರ ಅಧಿಕಾರ ವಹಿಸಿಕೊಂಡು ೨ ವರ್ಷಗಳು ಸಂದವು. ಈ ಅವಧಿಯಲ್ಲಿ ಕೈಕೊಂಡ ಜನಹಿತ ಕಾರ್ಯಗಳನ್ನು ಹೆಮ್ಮೆಯಿಂದ ಸ್ಮರಿಸಬಹುದಾಗಿದೆ.

ಹೊಸ ಸರ್ಕಾರ ಆಡಳಿತ ವಹಿಸಿಕೊಂಡ ದಿನವೇ ಪ್ರಾಶಸ್ತ್ಯಗಳನ್ನು ಗುರುತಿಸಿತು. ಮೊದಲನೆಯದಾಗಿ ಆಡಳಿತ ಕ್ರಮಗಳನ್ನು ಸುಗಮಗೊಳಿಸುವುದು. ಫಲಸ್ವರೂಪ ಜಿಲ್ಲಾ ಮತ್ತು ವಿಭಾಗೀಯ ಕೇಂದ್ರಗಳಲ್ಲಿ ಮಂತ್ರಿಮಂಡಲದ ಸಭೆಗಳನ್ನು ನಡೆಸಲಾಗುತ್ತಿದೆ.

ಜನತೆಯ ಮನೆಯ ಬಾಗಿಲಿಗೇ ಸರ್ಕಾರ ನಡೆದು ಬಂದಾಗ ಜನತೆಯೊಡನೆ ನೇರ ಸಂಪರ್ಕ, ಸ್ಥಳೀಯ ಸಮಸ್ಯೆಗಳ ಪ್ರತ್ಯಕ್ಷ ಅನುಭವ, ಪರಿಶೀಲನೆ, ಪರಿಹಾರ, ಬೆಳಗಾಂವ, ಗುಲ್ಬರ್ಗ ಮತ್ತು ಮೈಸೂರುಗಳಲ್ಲಿ ಸಭೆ ನಡೆಸಿ, ಆ ವಿಭಾಗಗಳಲ್ಲಿಯ ಅಭಿವೃದ್ಧಿ ಕಾರ್ಯಗಳಿಗಾಗಿ ಹಣದ ಮತ್ತು ಇತರ ಅಡಚಣೆಗಳ ನಿವಾರಣೆ ಪ್ರಗತಿಪಥ ಚಲನೆಗೆ ನವಚೇತನ.

ಭೂ ಸುಧಾರಣೆ ಕಾಯ್ದೆ ಜಾರಿಗೆ ಬಂದು ಎರಡು ದಶಕಗಳಾದರೂ ಕಳೆದೆರಡು ವರ್ಷಗಳ ಸಾಧನೆ ಅವಿಸ್ಮರಣೀಯ. ಈಗಾಗಲೇ ಶೇಕಡಾ ೯೫ರಷ್ಟು ಗೇಣಿದಾರರ ಅರ್ಜಿಗಳು ವಿಲೇವಾರಿಯಾಗಿದ್ದು ಸುಮಾರು ೫ ಲಕ್ಷ ಗೇಣಿದಾರರು ಭೂ ಒಡೆತನ ಪಡೆದಿದ್ದಾರೆ. ಸುಮಾರು ೧ ಲಕ್ಷ ಭೂರಹಿತ ಬಡವರಿಗೆ ಭೂಮಿ ಹಂಚಲಾಗಿದೆ. ಇದರಲ್ಲಿ ಶೇಕಡಾ ೫೦ರಷ್ಟು ಜನರು ಹರಿಜನರು.

ಹಾರಂಗಿ, ಹೇಮಾವತಿ, ಹಾಗೂ ಮಲಪ್ರಭಾಗಳಿಂದ ನೀರು ಬಿಡುಗಡೆ. ಹೆಚ್ಚುವರಿ ಭೂಮಿಗೆ ನೀರಿನ ಪೂರೈಕೆ. ಹಸಿರು ಕ್ರಾಂತಿಗೆ ಮತ್ತಷ್ಟು ಬಲ.

ಹಿಂದುಳಿದ ಪ್ರದೇಶ ಗುಲ್ಬರ್ಗಾ ವಿಭಾಗದ ಅಭಿವೃದ್ಧಿಗಾಗಿ ಪ್ರತ್ಯೇಕ ಗುಲ್ಬರ್ಗಾ ಪ್ರದೇಶ ಅಭಿವೃದ್ಧಿ ಕಾರ್ಪೊರೇಷನ್ ಸ್ಥಾಪನೆ. ಗುಲ್ಬರ್ಗಾ ನಗರಸಭೆಯನ್ನು ಕಾರ್ಪೊರೇಷನ್ ಆಗಿ ಪರಿವರ್ತಿಸಲಾಯಿತು. ವಿಶ್ವಕನ್ನಡ ಸಮ್ಮೇಳನಕ್ಕಾಗಿ ಭರದಿಂದ ಸಿದ್ಧತೆ ನಡೆಯುತ್ತಿದ್ದು, ಜಿಲ್ಲಾ ಕೇಂದ್ರಗಳಲ್ಲಿ ಸಾಹಿತ್ಯಭವನ ನಿರ್ಮಿಸಲು ನಿರ್ಧರಿಸಲಾಗಿದೆ. ಪತ್ರಿಕೋದ್ಯಮದ ಬೆಳವಣಿಗೆಗಾಗಿ ಪತ್ರಿಕಾ ಅಕಾಡೆಮಿಯನ್ನು ಸ್ಥಾಪಿಸಲಾಗಿದೆ.

ರಾಜ್ಯೋತ್ಸವ ಬೆಳ್ಳಿ ಹಬ್ಬದ ಈ ವರ್ಷ ಮುನ್ನೂರಕ್ಕೂ ಹೆಚ್ಚು ಜನಸಂಖ್ಯೆ ಇರುವ ಶಾಲೆಗಳಿಲ್ಲದ ಎಲ್ಲ ಹಳ್ಳಿಗಳಿಗೂ ಪ್ರಾಥಮಿಕ ಶಾಲೆಗಳನ್ನು ಮತ್ತು ಕೊಠಡಿಗಳನ್ನು ಒದಗಿಸಬೇಕೆಂಬುದು ಸರ್ಕಾರದ ನಿಲುವು. ಇದರಂತೆ ೬೪೯ ಹಳ್ಳಿಗಳಲ್ಲಿ ಶಾಲೆಗಳನ್ನು ತೆರೆಯಲು ಮತ್ತು ೧,೪೧೬ ಹಳ್ಳಿಗಳಲ್ಲಿ ಶಾಲಾ ಕೊಠಡಿಗಳನ್ನು ನಿರ್ಮಿಸಲು ಕ್ರಮ ಕೈಗೊಳ್ಳಲಾಗಿದೆ.

ಪ್ರಸ್ತುತ ಸರ್ಕಾರ ಗ್ರಾಮೀಣ ವಸತಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿದೆ. ೧೯೭೩-೭೪ ರಿಂದ ೧೯೭೯ರ ಅಂತ್ಯದ ವೇಳೆಗೆ ೧.೩೬ ಲಕ್ಷ ಮನೆಗಳನ್ನು ಕಟ್ಟಿ ಪೂರ್ಣಗೊಳಿಸಿದರೆ, ಜನವರಿ ೧೯೮೦ ರಿಂದ ಇಲ್ಲಿಯ ವರೆಗೆ ೧.೩೩ ಲಕ್ಷ ಮನೆಗಳನ್ನು ಕಟ್ಟಿ ಮುಗಿಸಲಾಗಿದೆ. ಒಟ್ಟು ಕಟ್ಟಲಾದ ಮನೆಗಳ ಪೈಕಿ ೧.೨೦ ಲಕ್ಷ ಮನೆಗಳು ಹರಿಜನರಿಗೆ ಸೇರಿವೆ. ಮತ್ತೆ ೬೦೦೦ ಮನೆಗಳ ನಿರ್ಮಾಣಕ್ಕೆ ಮಂಜೂರಾತಿ ನೀಡಲಾಗಿದ್ದು ೩ ಕೋಟಿ ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.

ಹರಿಜನರ ಸಮಗ್ರ ಅಭಿವೃದ್ಧಿಗಾಗಿ ಕರ್ನಾಟಕದಲ್ಲಿ ವಿಶೇಷ ಯೋಜನೆಯೊಂದನ್ನು ಕೈಗೊಳ್ಳಲಾಗಿದೆ. ಈ ವರ್ಷ ಈ ಯೋಜನೆಯ ಅಂತರ್ಗತ ಅಭಿವೃದ್ಧಿ ಕಾರ್ಯಗಳಿಗಾಗಿ ೧೩೫.೬೬ ಕೋಟಿ ರೂ.ಗಳನ್ನು ಒದಗಿಸಲಾಗಿದೆ. ಕರ್ನಾಟಕದಲ್ಲಿ ಕಂಡುಬಂದಿರುವ ನವಚೇತವೇ ಸರ್ಕಾರದ ಸಾಧನೆಗೆ ಸಾಕ್ಷಿ. ಅತ್ಯುತ್ತಮ ಯೋಜನೆ ವಿಧಾನವೆಂದರೆ, ಈ ವರೆಗಿನ ಸಾಧನೆಗಳ ಸಿಂಹಾವಲೋಕನ, ಅವುಗಳ ಮೌಲ್ಯಮಾಪನ ಹಾಗೂ ಅವುಗಳ ಮಾರ್ಗದರ್ಶನದಿಂದ ಹೊಸ ದಿಕ್ಕಿನಲ್ಲಿ ಹೊಸ ಭರವಸೆಯೊಂದಿಗೆ ಮುನ್ನಡೆಯುವುದು.

**ಪ್ರಕಟಣೆ: ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ**

# ಸೆಕೆಯು ನಿಮ್ಮ ಶಕ್ತಿಯನು ಅಪಹರಿಸಿದಾಗ...





ನಿಮ್ಮ ವಿಶ್ವಾಸಪಾತ್ರ ಗ್ಲೂಕೋಸ್-ಡಿಯ ಹೊಸ ಹೆಸರು.

## ತೆಗೆದುಕೊಳ್ಳಿರಿ ಗ್ಲುಕೋನ್-ಡಿ ®

**ಹೆಚ್ಚಿನ ಶಕ್ತಿಗಾಗಿ— ನಿಮಗೆ ಬೇಕಾದಾಗ**

ಸೆಕೆಯು ನಿಮಗೆ ಆಯಾಸವನ್ನುಂಟು ಮಾಡುತ್ತದೆ, ನಿಮ್ಮನ್ನು ನಿರುತ್ಸಾಹಿಯಾಗಿ ಮಾಡುತ್ತದೆ. ಆಗ ನಿಮಗೆ ಉಲ್ಲಾಸಕರವಾದ, ತಂಪುಗೊಳಿಸುವ ಗ್ಲುಕೋನ್-ಡಿಯ ಅವಶ್ಯಕತೆಯಿರುತ್ತದೆ. ಇದು ನಿಮ್ಮ ಇಡೀ ಕುಟುಂಬದವರಿಗಾಗಿ ಇದೆ. ಗ್ಲುಕೋನ್-ಡಿಯನ್ನು ಯಾವುದೇ ಪೇಯಕ್ಕೆ—ಹಣ್ಣಿನ ರಸ, ಹಾಲು, ಚಹಾ, ಕಾಫಿ, ನೀರು ಇತ್ಯಾದಿಗಳಿಗೆ ಸೇರಿಸಿ ತೆಗೆದುಕೊಳ್ಳಿರಿ. ಅಥವಾ ಅದೊಂದನ್ನೇ ತೆಗೆದುಕೊಳ್ಳಿರಿ. ಕೂಡಲೇ ಶರೀರದಲ್ಲಿ ಶಕ್ತಿಯು ಪುನಃ ಮೂಡುವುದರ ಅನುಭವ ಪಡೆಯಿರಿ!

ಅದೇ ಪರಿಚಿತ ಹಸುರು ಪ್ಯಾಕ್‌ನಲ್ಲಿ ದೊರೆಯುತ್ತದೆ.




**ವಿಟಮಿನ್ ಡಿ ಮತ್ತು ಕ್ಯಾಲ್ಸಿಯಂ ಫಾಸ್ಫೇಟ್‌ಗಳಿಂದ ಸಮೃದ್ಧವಾದ ಆಪ.ಟ ಗ್ಲೂಕೋಸ್ ಪೌಡರ್—ಗ್ಲ್ಯಾಕ್ಸೋ ಕಂಪೆನಿಯ ಕೊಡುಗೆ.**

# 'ಕಸ್ತೂರಿ'ಯ ಅರ್ಧವಾರ್ಷಿಕ ಪರಿವಿಡಿ

## ಸಪ್ಟೆಂಬರ್ ೧೯೮೧ ರಿಂದ ಫೆಬ್ರುವರಿ ೧೯೮೨ ರ ವರೆಗೆ

ಕ್ರಮ : ಲೇಖನದ ಹೆಸರು, ತಿಂಗಳು, ಪುಟಸಂಖ್ಯೆ

ಸ = ಸಪ್ಟೆಂಬರ್  ಅ = ಅಕ್ಟೋಬರ್  ನ = ನವೆಂಬರ್  ಡಿ = ಡಿಸೆಂಬರ್
ಜ = ಜನೆವರಿ  ಫೆ = ಫೆಬ್ರುವರಿ

---

### ಅನುಭವ



### ಆರೋಗ್ಯ-ವೈದ್ಯಕೀಯ



### ಇತಿಹಾಸ



### ಇದುವೇ ಜೀವ ಇದು ಜೀವನ

## ಕಥೆ



## ಕಲೆ



## ಕವನ-[illegible]



## ಚರ್ಚೆ-ಚಿಂತನ



## ಜೀವನ ಚರಿತ್ರೆ-ವ್ಯಕ್ತಿಚಿತ್ರ

**ವಿಜ್ಞಾನ**



**ಸಾಮಾನ್ಯ**


ಸಂಸ್ಕೃತವಿಲ್ಲಿ ಇಂದಿಗೂ ಜನಭಾಷೆ ಜ. ೬೪

**ಹರಟೆ-ನಗೆಬರಹ**





# ಕಸ್ತೂರಿ

ಕನ್ನಡ ಡೈಜೆಸ್ಟ್



ಸಹಾಯಕ ಸಂಪಾದಕ :

ಮಾಧವ ನಾ. ಮಹಿಷಿ

ಕಲೆ :

ಕೆ. ಬಿ. ಕುಲಕರ್ಣಿ

ಮುಖಪುಟ :

ಒಂದು ವರ್ಣಸಂಯೋಜನೆ

ಚಿತ್ರ :

ಎನ್. ಮುರಿಶಾಮಾಚಾರ್

ಜನವರಿ ೧೯೮೨ ರಿಂದ ಜಾರಿಯಲ್ಲಿ ಬರುವ ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೫೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೮-೦೦ |
| ೨ ವರ್ಷಕ್ಕೆ | ,, | ೫೫-೦೦ |
| ೩ ವರ್ಷಕ್ಕೆ | ,, | ೮೨-೦೦ |



## ಬೆಳಕಿಂಡಿ

ಇಂದಿನ ದುರ್ಭರ ದಿನಗಳಲ್ಲಿ ಜನಸಾಮಾನ್ಯರ ಎದುರಿಗಿರುವ ಪ್ರಶ್ನೆ ಒಂದೇ ಒಂದು; ಆದಾಯಕ್ಕನುಸಾರವಾಗಿಯೇ ಜೀವಿಸುವುದೋ ಅಥವಾ ಆಗೀಗ ಒಂದಿಷ್ಟು ಆನಂದವನ್ನು ಅನುಭವಿಸುವುದೋ. —'ನವನೀತ'ದಿಂದ

■

ಒಬ್ಬಾಕೆ ಶಕುಂತಲೆಯ ಪಾತ್ರವನ್ನು ನೈಜವಾಗಿ ನಟಿಸುವಷ್ಟು ಪರಿಣತಿಯನ್ನು ಪಡೆದಿದ್ದಾಳೆಂದರೆ ಆಕೆಯ ವಯಸ್ಸಿಗೂ ಪಾತ್ರಕ್ಕೂ ಸಂಬಂಧವೇ ಇಲ್ಲ ಎಂದರ್ಥ.

—ಎಥಿಲ್ ಬ್ಯಾರಿಮೂರ್

■

ಸೊಳ್ಳೆ ಆನೆಯನ್ನು ಕಚ್ಚಬಹುದೇ ಹೊರತು ಆನೆಗೆ ಸೊಳ್ಳೆಯನ್ನು ಕಚ್ಚಲಾದೀತೆ? —ಜೋಸೆಫ್ ಅರ್ಥರ್

■

ಫ್ಯಾಶನೇಬಲ್ ಆಗುವುದು ಯಾವ ದೃಷ್ಟಿಯಿಂದಲೂ ಒಳ್ಳೆಯದಲ್ಲ. ಅದರಿಂದಾಗಿಯೇ ಒಂದಿಲ್ಲೊಂದು ದಿನ ಓಲ್ಡ್ ಫ್ಯಾಶನ್ ಆಗಬೇಕಾದೀತು.

—ಜಾರ್ಜ್ ಸಂತಾಯನಾ

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೇ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ



**ಪುಸ್ತಕ ವಿಭಾಗ**

## ವಿರೋಧಾಭಾಸ

ಶ್ರೀನಿವಾಸ ಕೋಟೇಶ್ವರರ 'ರ್‍ಯಾಗಿಂಗ್'ನ ಶಿರೋನಾಮೆ ಇದು ಸುಸಂಸ್ಕೃತರ ಲಕ್ಷಣವೇ ಎಂಬ ಮಾತು ಉಪಸಂಹಾರದಲ್ಲಿ ಅಡಗಿರುವ ಅರ್ಥಕ್ಕೆ ವಿರೋಧಾಭಾಸವಾಗಿದೆ. ಅವರು ಪ್ರಾರಂಭದಲ್ಲಿ ರ್‍ಯಾಗಿಂಗ್ ವಿಷಯದಲ್ಲಿ ಆಗ್ರಹತೋರಿಸಿ, ರ್‍ಯಾಗಿಂಗಿಗೆ ಬಲಿಯಾದ ವಿದ್ಯಾರ್ಥಿಗಳ ನೋವು ಸಂಕಟಗಳಲ್ಲಿ ಅನುಕಂಪಪಟ್ಟು, ಅದರ ನಿರ್ಮೂಲನಕ್ಕೆ ಸಲಹೆ ನೀಡಿ, ಕೊನೆಯಲ್ಲಿ ತಮಗೇ ತಿಳಿಯದೆಯೇ ರ್‍ಯಾಗಿಂಗ್ ಸರಿಯೆಂಬ ಭಾವ ಮೂಡಿಸಿದಂತಿದೆ. ಈ ಭಾವ ಅವರ ಅಸಹಾಯಕತೆಯನ್ನು ಸೂಚಿಸುವಂತಿಲ್ಲ.

ಹಿಂದೆ ಹೆಣ್ಣು ಒಂದು ಕೂಸಾಗಿರುವಾಗಲೇ ಸೊಸೆಯಾಗುತ್ತಿದ್ದಳು. ಅತ್ತೆಯ ವಯಸ್ಸು, ಅನುಭವ ಅಪಾರ. ಹೀಗಾಗಿ ಅತ್ತೆಗೂ ಸೊಸೆಗೂ ಇರುತ್ತಿದ್ದ ಸಂಬಂಧ ಒಂದು ರೀತಿಯಲ್ಲಿ ಅಪೇಕ್ಷಣೀಯವಾಗಿತ್ತು. ಆದರೀಗ ಅತ್ತೆಯರೇ ಸೊಸೆಯರ ಮನೋಭಾವಕ್ಕೆ ಹೊಂದಿಕೊಳ್ಳಬೇಕಾಗಿದೆ.

ಸತ್ಯ ಸಂಗತಿ ಎಂದರೆ ರ್‍ಯಾಗಿಂಗ್ ವಿದ್ಯಾರ್ಥಿಗಳನ್ನು ಅಸಹ್ಯ ಮೋಜಿನ ಅವಸ್ಥೆಯಲ್ಲಿ ಸಿಕ್ಕಿಸುತ್ತದೆ. ಫ್ರೆಶರ್ಸ್ ಹಾಸ್ಟೆಲಿನಲ್ಲಿ ಪರದೇಶಿಗಳಂತೆ. ಅವರನ್ನು ಹಿರಿಯ ವಿದ್ಯಾರ್ಥಿಗಳು ಗುಲಾಮರಂತೆ ಕಾಣುತ್ತಾರೆ. ವಿಲಾಸೀ ಕ್ರೀಡೆಗೆ ಬಳಸುತ್ತಾರೆ. ಮೂತ್ರ ಕುಡಿಸುತ್ತಾರೆ. ಹೆಣ್ಣಿನ ಸಂಗಕ್ಕೆ ಆಗ್ರಹಪಡಿಸುತ್ತಾರೆ. ಕುಡಿತದ ಚಟ ಹಿಡಿಸುತ್ತಾರೆ. ಹೆಂಡಗುಡುಕರನ್ನಾಗಿ ಮಾಡುತ್ತಾರೆ. ಮುಂದಿನ ವರ್ಷ ಇವರೂ ಫ್ರೆಶರ್ಸ್‌ರನ್ನು ರ್‍ಯಾಗ್ ಮಾಡಲೇಬೇಕು. ಸೀನಿಯರ್ ಎಷ್ಟೇ ದುರ್ಬಲನಾಗಲೀ ದಡ್ಡನಾಗಲಿ ಫ್ರೆಶರ್ ಅವನ ಚಿತ್ತಾನುಸಾರ ಆಜ್ಞಾನುಸಾರ ನಗ್ನನಾಗಿ ರತಿಕ್ರೀಡೆಯಿಂದ ಎಲ್ಲದಕ್ಕೂ ಸಿದ್ಧನಾಗಿರಬೇಕು. ಸರಕಾರ ಸಾರ್ವಜನಿಕರೂ ಈ ಅಮಾನುಷ ರ್‍ಯಾಗಿಂಗನ್ನು ಕೊನೆಗೊಳಿಸಲೆತ್ನಿಸಲಿ.

ಬೆಂಗಳೂರು — ಎಚ್. ಎಸ್. ಕೇಶವಮೂರ್ತಿ

[೧೯೮೧ ಡಿಸೆಂಬರ್ 'ಕಸ್ತೂರಿ'ಯಲ್ಲಿ ಬಂದ 'ರ್‍ಯಾಗಿಂಗ್'ಲೇಖನ ೧೩-೧೨-೮೧ರ 'ಪ್ರಜಾಮತ'ದಲ್ಲೂ ಬಂದಿರುವುದನ್ನು ಅನೇಕ ಓದುಗರು ನಮ್ಮ ಗಮನಕ್ಕೆ ತಂದಿದ್ದಾರೆ. ಕಳೆದ ಜುಲೈ ತಿಂಗಳಲ್ಲೇ 'ಪ್ರಜಾಮತ'ಕ್ಕೆ ಈ ಲೇಖನ ಕಳಿಸಿ, ಅಲ್ಲಿಂದ ಯಾವ ಪ್ರತಿಕ್ರಿಯೆಯೂ ಬಾರದಿದ್ದಾಗ ಮಾತ್ರವೇ ಅದನ್ನು 'ಕಸ್ತೂರಿ'ಗೆ ಕಳಿಸಿದ್ದಾಗಿಯೂ 'ಕಸ್ತೂರಿ' ಲೇಖನದ ಸ್ವೀಕೃತಿಯ ಬಗ್ಗೆ ತಿಳಿಸಿದೊಡನೆಯೇ ಆ ಲೇಖನವನ್ನು ಪ್ರಕಟಿಸಕೂಡದೆಂದು 'ಪ್ರಜಾಮತ'ಕ್ಕೆ ತಿಳಿಸಿದ್ದಾಗಿಯೂ ಲೇಖಕರು ಬರೆದಿದ್ದಾರೆ. —ಸಂ.]

## ಸುಳ್ಳು!

ಜನವರಿ ಸಂಚಿಕೆ ಓದಿದೆ. ಇದರಲ್ಲಿ ನನ್ನ ಮಿತ್ರರಾದ ಹೆಚ್. ಕೆ. ರಮೇಶರವರು 'ಇದುವೇ ಜೀವ... ಇದು ಜೀವನ' ಎಂಬ ಶಿರೋನಾಮೆಯಡಿಯಲ್ಲಿ ಅವರ ಜೀವನದಲ್ಲಾದ ಪ್ರಸಂಗವನ್ನು ವಿವರಿಸುವ ಕೃಪೆದೋರಿದ್ದಾರೆ. ಆದರೆ ಇವರ ಈ ಪ್ರಸಂಗ ಬಹಳ ಕಾಲ್ಪನಿಕವಾಗಿರಬಹುದೆಂದು ನನ್ನ ಅನಿಸಿಕೆ. ಏಕೆಂದರೆ ನಾನು ಇದೇ ಹನುಮಯ್ಯ ಸಂಸ್ಥೆಯಲ್ಲಿ ೧೯೬೮ರಿಂದಲೂ ಇದ್ದೇನೆ. ನನಗೆ ತಿಳಿದಮಟ್ಟಿಗೆ ಈ ಸಂಸ್ಥೆಯಲ್ಲಿ ಹನುಮನು ಎಂಬ ಯಾವ ಜವಾನನೂ ಇದ್ದಂತಿಲ್ಲ. ಆದ್ದರಿಂದ ಲೇಖಕರು ಈ ಬಗ್ಗೆ ಕಾಲ್ಪನಿಕ ಪ್ರಸಂಗವೊಂದನ್ನು ಹೆಣೆದಿದ್ದಾರೆನಿಸುತ್ತದೆ. ಲೇಖಕರ ದೃಷ್ಟಿಯಲ್ಲಿ ಅಲ್ಲಿ ಮಾನವೀಯತೆ ಇರಬಹುದು. ಆದರೂ ವಾಸ್ತವಿಕತೆಗೆ ಪ್ರಾಶಸ್ತ್ಯ ಇರುವ ಈ ಮಾಸಿಕದಲ್ಲಿ ಈ ರೀತಿ ಉಲ್ಲೇಖಿಸುವುದು ತಪ್ಪು.

ಮೈಸೂರು-೧ — ಜಿ. ಎಲ್. ಶಂಕರ

ಹೊಸವರ್ಷದ ಜನವರಿ ಸಂಚಿಕೆಯನ್ನು ಓದಿ ನನ್ನ ಮನಸ್ಸಿಗೆ ತುಂಬಾ ಸಂತೋಷವಾಯಿತು. ಈ ಸಂಚಿಕೆಯಲ್ಲಿನ ಲೇಖನ, ಕಥೆಗಳು ಎಲ್ಲವೂ ಬಹಳ ಚೆನ್ನಾಗಿವೆ. ಕಥೆಗಳಲ್ಲಿ ಎಂ. ಎಚ್. ನಾಯಕಬಾಡರವರ 'ಕ್ಷಮೆ' ಮತ್ತು ರಾಮಚಂದ್ರ

ಮೆರಾಳಿಸುವರ 'ಮಂಜಿನ ಬೆಳಕು' ಬಹಳ ಹೃದಯಸ್ಪರ್ಶಿಯಾಗಿವೆ. ಲೇಖನಗಳಲ್ಲಿ 'ಫಿಜಿ ಭಾರತೀಯವಾದ ಅಭಾರತೀಯ ದ್ವೀಪ' ಮತ್ತು 'ಪ್ರಾಚೀನ ಭಾರತದಲ್ಲಿ ಧಾರ್ಮಿಕ ಬಂಡಾಯ' ಉತ್ತಮವಾಗಿವೆ. ಆಧುನಿಕ ವೈದ್ಯಶಾಸ್ತ್ರದ ಕೊಡುಗೆಯಾಗಿ ಬರಲಿರುವ 'ಬಯೋಫೀಡ್ ಬ್ಯಾಕ್' ಎಂಬ ಹೊಸಬಗೆಯ ಚಿಕಿತ್ಸೆ ವಿಧಾನದ ಬಗ್ಗೆ ವಿಷಯ ಬೆಳಕಿಗೆ ತಂದಿರುವ ಡಾ. ಕೆ. ಎಂ. ನರಸಿಂಹಸ್ವಾಮಿ ಕಳಸರವರಿಗೆ ವಂದನೆಗಳು.

ಶ್ರೀರಂಗಪಟ್ಟಣ — ಆರ್. ಸುರೇಶ

**ಆಕ್ಷೇಪಕರ**

ಜನವರಿ ೧೯೮೧ರ 'ಕಸ್ತೂರಿ'ಯ ೧೮ನೇ ಪುಟದಲ್ಲಿ ಪ್ರಕಟವಾದ ಶ್ರೀಮತಿ ಎಸ್. ಜಯಾ ಸೂರ್ಯನಾರಾಯಣಪ್ಪ ಇವರ 'ಸಾಮೂಹಿಕ ಮತಾಂತರ'ದ ಬಿಡುಗು ಕಾಣಿಸಿಕೊಂಡ ಈ ಸಂದಿಗ್ಧ ಸಮಯದಲ್ಲಿ ಇತರ ಧರ್ಮಗಳನ್ನು ಸಮರ್ಥಿಸುವಂತಿದ್ದ ಈ ಚುಟುಕ ಸಕಾಲಿಕವಾಗಿರಲಿಲ್ಲ. ಅಲ್ಲದೇ ಆಕ್ಷೇಪಕಾರಕವೂ ಹೌದು.

ಪರ್ಕಳ — ಕೆ. ಶ್ರೀಧರ ಪೈ

**ಸರಿಯಲ್ಲ**

ಜನವರಿ ಸಂಚಿಕೆಯ ೧೦೬ನೇ ಪುಟದಲ್ಲಿರುವ ಚಿತ್ರ ಸರಿಯಾಗಿದೆ. ಆದರೆ ಹಿಟ್ಲರನ ಎಡ ತೋಳಿನ ಮೇಲಿನ ಸ್ವಸ್ತಿಕ ಚಿಹ್ನೆ ಮಾತ್ರ ಬಲಕ್ಕೆ (ನೋಡುಗರ) ಮುಖ ಮಾಡಿದಂತಿದೆ. ಆದರೆ ಅವನ ಸ್ವಸ್ತಿಕದ ಮುಖ ಎಡಕ್ಕೆ ಇದ್ದಿತ್ತು.

ನಾಗಮಂಗಲ — ಕೆ. ಬಿ. ಕೆಂಪಗಣ್ಣಪ್ಪ

[ನೀವು ಚಿತ್ರತೋರಿಸಿದ ಅಂಶ ಸರಿಯಾಗಿದೆ. ಈ ಪ್ರಮಾದಕ್ಕಾಗಿ ವಿಷಾದಿಸುತ್ತೇವೆ. ಸಂ.]

**ಕ್ಷಯ**

ಜನವರಿ ತಿಂಗಳ 'ಕಸ್ತೂರಿ'ಯಲ್ಲಿ ಎಂ. ಎಚ್. ನಾಯಕಬಾಡ ಇವರ 'ಕ್ಷಯ' ಕಥೆಯನ್ನು ಓದಿದೆ. ಕಥೆಗಾರರೋ ಇವರ ಇನ್ನೊಂದು ಹೆಸರು ಎಂತ ಭಾವಿಸುತ್ತಿದ್ದ ನಾನು ಎಂದಿನಿಂದಲೂ ಇವರ ಕಥೆಗಳನ್ನು ಅತ್ಯಂತ ಮೆಚ್ಚುಗೆಯಿಂದ ಓದುತ್ತ ಬಂದವನು. ಆದರಂತೆ ಈ ಕಥೆಯೂ ಮನಃಪಟಲದಲ್ಲಿ ಮೆಚ್ಚುಗೆ ಅಚ್ಚು ಮಾಡದೆ ಇರಲಿಲ್ಲ. ಆದರೆ ಇದಕ್ಕೆ 'ಕ್ಷಯ'ವೆಂತ ಶೀರ್ಷಿಕೆ ಏಕೆ ಬಂತು?

ಅಗಸ್ಸರ — ಡಾ. ಜಿ. ಆರ್. ಭಟ್ಟ

**ಪುಸ್ತಕ ವಿಭಾಗ**

ಟ್ರ್ಯಾಪ್ ಕುಟುಂಬದ ಸುತ್ತ ಹೆಣೆಯಲಾದ ಸಂಗೀತನಾದ (ಪುಸ್ತಕ ವಿಭಾಗ, ಜನವರಿ ೮೧) ಪ್ರೇಮ, ಆದರ್ಶ, ಸ್ವಾಭಿಮಾನಗಳ ಸುವ್ಯಕ್ತ ಪ್ರಜ್ಞೆಯ ಪ್ರತೀಕವೊಂದೇ ಆಗಿರದೆ ಉದ್ಯೋಗ, ಕಾಂಚಾಣಗಳ ಪ್ರಭಾವಗಳಿಗೆ ಮಣಿಯದೆ ಸಂಗೀತಕ್ಕೆ ಜೀವನ ಪೂರ್ತಿ ಮುಡಿಪಾಗಿಟ್ಟ, ಆತ್ಮತ್ಯಾಗದ ಪರಮಾವಧಿಯ ಮಾದರಿಯಾದ ಸುಂದರ ಚರಿತ್ರೆ.

ಹಾರೋಕೊಪ್ಪ — ಎಚ್. ಎಸ್. ಶ್ರೀಪಾದಭಟ್ಟ

**ಮಹಾರಾಷ್ಟ್ರದ ಕನ್ನಡಿಗರಲ್ಲಿ ಒಂದು ವಿನಂತಿ**

೧೯೮೧ರ ನವೆಂಬರ ತಿಂಗಳಲ್ಲಿ ಮೈಸೂರಿನಲ್ಲಿ ನಡೆಯಲಿರುವ ಪ್ರಥಮ ವಿಶ್ವ ಕನ್ನಡ ಸಮ್ಮೇಳನದ ಸಂದರ್ಭದಲ್ಲಿ ಮಹಾರಾಷ್ಟ್ರದಲ್ಲಿರುವ ಕನ್ನಡ ಬರಹಗಾರರು, ಕಲಾವಿದರು ಹಾಗೂ ಸಂಘ ಸಂಸ್ಥೆಗಳ ಕಿರುಪರಿಚಯವುಳ್ಳ ಕೃತಿಯೊಂದನ್ನು ಪ್ರಕಟಿಸುವ ಯೋಜನೆಯನ್ನು ಮುಂಬಯಿಯ 'ಕನ್ನಡ ಸಾಹಿತ್ಯ ಸಂಗಮ'ವು ಇಟ್ಟುಕೊಂಡಿದೆ. ಅಲ್ಲದೆ ಸಮ್ಮೇಳನದಲ್ಲಿ ಮಹಾರಾಷ್ಟ್ರದಲ್ಲಿರುವ ಕನ್ನಡ ಲೇಖಕರ ಕೃತಿಗಳ ಪ್ರದರ್ಶನ ಮತ್ತು ಮಾರಾಟದ ವ್ಯವಸ್ಥೆಯನ್ನು ಕೈಗೊಳ್ಳುವ ಪ್ರಯತ್ನದಲ್ಲಿದೆ. ಆದ್ದರಿಂದ ಬರಹಗಾರರು, ಕಲಾವಿದರು ಹಾಗೂ ಸಂಘ ಸಂಸ್ಥೆಗಳಿಗೆ ಸಂಬಂಧಪಟ್ಟವರು ಕೂಡಲೇ ತಮ್ಮ ವಿಳಾಸಗಳನ್ನು ಕಳುಹಿಸಿಕೊಡುವುದಲ್ಲದೆ ತಮಗೆ ತಿಳಿದಿರುವ ಮಹಾರಾಷ್ಟ್ರದಲ್ಲಿನ ಇತರ ಕನ್ನಡ ಲೇಖಕರು/ಕಲಾವಿದರು ಸಂಘ ಸಂಸ್ಥೆಗಳ ವಿಳಾಸ, ಮಾಹಿತಿಗಳನ್ನು ತಿಳಿಸಬೇಕಾಗಿ ವಿನಂತಿ.

ಕನ್ನಡ ಸಾಹಿತ್ಯ ಸಂಗಮ, ಎ. ೧/೧೫ ಪ್ರಗತಿ ನಗರ, ೬. ತಿಲಕರೋಡ್, ಗೋರೆಗಾಂವ್ (ಪ)
ಮುಂಬಯಿ–೪೦೦ ೦೬೨

ಕಸ್ತೂರಿ

ವರ್ಷ: ೨೬ ಫೆಬ್ರುವರಿ, ೧೯೮೨ ಸಂಚಿಕೆ: ೬

# ಪ್ರಕೃತಿಯಿಂದ ಒಂದು ಪಾಠ

ಜಿ ನಾರಾಯಣ

ಗುರು ನಿಧಾನವಾಗಿ ಮುನ್ನಡೆದ.

ಶಿಷ್ಯರು ಹಿಂಬಾಲಿಸಿದರು. ಗುರು ತನ್ನ ವಿಶಾಲವಾದ ಹಣೆಗೆ ದಟ್ಟವಾಗಿ ವಿಭೂತಿ ಬಳಿದಿದ್ದ. ಆವನ ನೀಳವಾದ ಗಡ್ಡ ಹಿಮ ಶುಭ್ರವಾಗಿತ್ತು ಕಾಷಾಯ ವಸ್ತ್ರಧರಿಸಿದ್ದ ಆತನ ಕುತ್ತಿಗೆಯ ಸುತ್ತ ಮಣಿಗಳಿದ್ದುವು. ಗಾಂಭೀರ್ಯ ಹಾಗೂ ಶಾಂತತೆಗಳನ್ನು ಅವನ ಮುಖದ ಮೇಲೆ ಓದಬಹುದಿತ್ತು.

ಶಿಷ್ಯರಿಗೂ ಅದೇ ಕಳೆಯಿತ್ತು. ಅವರ ತಲೆಗೂದಲು ಬೆಳೆದಿತ್ತು. ಕಣ್ಣುಗಳು ಅನ್ವೇಷಕವಾಗಿದ್ದುವು. ಅವರು ಕೈಗಳಲ್ಲಿ ತಾಳೆಯ ಎಲೆಯನ್ನೂ ಬರೆಯಲು 'ನಾರಾಯ'ವನ್ನೂ ಇಟ್ಟುಕೊಂಡಿದ್ದರು. ಸುಪ್ರಭಾತದ ಶುಭ್ರ ಬೆಳಕು ಎಲ್ಲೆಡೆ ಪಸರಿಸಿತ್ತು. ಮಂದಾನಿಲ ಕೋಮಲವಾದ ಎಲೆಗಳ ಮಧ್ಯೆ ವಿವಿಧ ಬಣ್ಣದ ಹೂಗಳ ಮಧ್ಯೆ ಸುಳಿದಾಡುತ್ತಿತ್ತು. ಪ್ರಕೃತಿ ಶಾಂತವಾಗಿತ್ತು. ಆಹ್ಲಾದ-ಕರವಾಗಿತ್ತು.

ಅನತಿ ದೂರದಲ್ಲೇ ನೂರಾರು ರೆಂಬೆಗಳನ್ನು ಚಾಚಿಕೊಂಡ ಆಲದ ಮರವೊಂದು ನಿಂತಿತ್ತು. ಅದರೆದೆಯಲ್ಲಿ ಎಷ್ಟೋ ವರ್ಷಗಳ ದೀರ್ಘ ಇತಿಹಾಸವಿತ್ತು. ಅದರ ಕೆಳಗಿನ ಹಸಿರು ಬಯಲಿನಲ್ಲಿ ಜಿಂಕೆಗಳು ನೆಗೆಯುತ್ತ ಆಡುತ್ತಿದ್ದುವು. ಅದರ ದಟ್ಟ ಎಲೆಗಳ ಮಧ್ಯದಿಂದ ಗಿಳಿಗಳ ಮಧುರ

(ಸುಬ್ಬಯ್ಯ ಪಿಳ್ಳೆ ಅವರ ಇಂಗ್ಲಿಷ್ ಕತೆಯ ಸ್ಫೂರ್ತಿಯಿಂದ)

ಗಾನ ಹೊಮ್ಮುತ್ತಿತ್ತು. ದೂರದ ಹಿನ್ನಲೆಯಲ್ಲಿ ಗೋಪುರಾಕಾರದ ಹಿಮಾಚ್ಛಾದಿತ ಪರ್ವತ ಕಾಣು ತ್ತಿತ್ತು.

ಅರಳಿದ ಮರದ ಬುಡವನ್ನು ತಲುಪುತ್ತಲೇ ಗುರು ನಿಂತ; ಶಿಷ್ಯರೂ. ಗುರು ಮರದ ಕೆಳಗಿನ ಕಲ್ಲೊಂದರ ಮೇಲೆ ಆಸೀನನಾಗಿ ಶಿಷ್ಯರಿಗೂ ಕುಳಿತುಕೊಳ್ಳುವಂತೆ ಸೂಚಿಸಿದ. ಅವರು ಗುರು ವಿನೆದುರು ಹಸಿರು ಹುಲ್ಲಿನ ಮೇಲೆ ಅರ್ಧವೃತ್ತಾ ಕಾರವಾಗಿ ಕುಳಿತರು. ಗುರುವಿನ ಪಾಂಡಿತ್ಯ ಪೂರ್ಣ ನಯನಗಳು ಅತ್ತಿತ್ತ ನೋಡಿದುವು. ಅತ ಹಿಮಾಚ್ಛಾದಿತ ಪರ್ವತವನ್ನು ನಂತರ ಅತ್ತಿತ್ತ ಆಡುತ್ತಿದ್ದ ಜಿಂಕೆಗಳನ್ನು ದಿಟ್ಟಿಸಿದ. ಕೆಲವು ಕ್ಷಣ ಯೋಚಿಸುತ್ತ ಕುಳಿತ. ಆನಂತರ ಮೃದು ಧ್ವನಿ ಯಲ್ಲಿ, "ನಾವು ವಾಸಿಸುವ ಈ ಜಗತ್ತು ವಾಸ್ತ ವಿಕವಾಗಿ ಗೂಢವಾದುದು. ಇಲ್ಲಿ ನಿಮಗೊಂದು ಪ್ರಶ್ನೆಯಿದೆ. ಈ ಪ್ರಪಂಚದಲ್ಲೇ ಅತಿ ಬಲಿಷ್ಠವಾದ ಹಾಗೂ ಸುಂದರವಾದ ಅಂಶ ಯಾವುದು? ನನಗೆ ಹೇಳಿ." ಎಂದ.

"ಮಗುವಿನ ಮುಗ್ಧ ನಗೆಯೇ ಈ ಪ್ರಪಂಚ ದಲ್ಲಿ ಸುಂದರವಾದ ಹಾಗೂ ಶಕ್ತಿಯುತವಾದ ಅಂಶ ಗುರುದೇವ," ಉತ್ತರ ಕೊಟ್ಟ ಶಿಷ್ಯನ ಮೊಗದಲ್ಲಿ ಪಾವಿತ್ರ್ಯದ ಕಿರಣ ಮಿನುಗುತ್ತಿತ್ತು.

"ಹೆಣ್ಣೇ ಈ ಪ್ರಪಂಚದಲ್ಲಿ ಅತಿ ಶಕ್ತಿಶಾಲಿ ಹಾಗೂ ಸುಂದರವಾದ ಅಂಶ ಗುರುವೇ," ಉತ್ತರಿಸಿದ ಶಿಷ್ಯನ ಮುಖ ಪ್ರೀತಿಯಿಂದ ಅರಳಿತ್ತು.

"ಹಣ ಗುರುವೇ, ಈ ಪ್ರಪಂಚದಲ್ಲೇ ಅತ್ಯಂತ ಸುಂದರವಾದ ಹಾಗೂ ಬಲಿಷ್ಠವಾದ ಅಂಶ ವೆಂದರೆ ಹಣ," ಹದ್ದಿನ ಕಣ್ಣಿನಂತೆ ಚುರುಕಾದ ಕಣ್ಣುಳ್ಳ ಶಿಷ್ಯ ಉತ್ತರ ನೀಡಿದ.

"ಹೊಳೆಯುವ ಖಡ್ಗವೇ ಅತ್ಯಂತ ಶಕ್ತಿಯುತ ಹಾಗೂ ಸುಂದರವಾದ ಅಂಶ ಗುರುದೇವ," ಕಾರ್ಯದ ಕಿಡಿಗಳು ಈ ಉತ್ತರವನ್ನು ನೀಡಿದ ಶಿಷ್ಯನ ಮುಖದಿಂದ ಸಿಡಿದುವು.

ಗುರು ನಗುಮುಖದಿಂದ ಪ್ರತಿಯೊಂದು ಉತ್ತರವನ್ನೂ ಆಲಿಸಿದ. ಅವನ ಮುಖ ಮಂದ ಹಾಸಕ್ಕೆ ತಿರುಗಿತು. ಅವನ ಶಿಷ್ಯರಲ್ಲೊಬ್ಬ ಅಳು ಕುತ್ತ ಮೇಲೆದ್ದು ಪ್ರಶ್ನಿಸಿದ, "ಈ ಉತ್ತರಗಳಲ್ಲಿ ಯಾವುದು ಸರಿಯಾದದ್ದು ಗುರುವೇ?"

"ಯಾವುದೂ ಸರಿಯಲ್ಲ." ಗುರು ವಿಳಂಬಿಸದೆ ನುಡಿದ. ನಂತರ ಮುಗುಳ್ನಗೆಯಿಂದ ವಿವರಿಸಿದ, "ಯಾರು ಮಗುವಿನ ಮುಗ್ಧ ಮುಗುಳ್ನಗೆಯಲ್ಲಿ ಸೌಂದರ್ಯ ಹಾಗೂ ಶಕ್ತಿಯನ್ನು ಕಾಣು ತ್ತಾನೋ ಅವನು ಕಲಾವಿದನಾಗಿ ನಿರಂತರ ಬಡ ತನದಲ್ಲಿ ಬದುಕುತ್ತಾನೆ. ಯಾವಾತ ಹೆಣ್ಣಿನಲ್ಲಿ ಸೌಂದರ್ಯ ಹಾಗೂ ಶಕ್ತಿಯನ್ನು ಕಾಣುತ್ತಾನೋ ಅವನು ಜೀವನದಲ್ಲಿ ನಲಿವು ನೋವುಗಳನ್ನನು- ಭವಿಸಿ ಜೀವನ ಶೂನ್ಯ ಎಂಬುದನ್ನು ಅರಿಯು ತ್ತಾನೆ. ಯಾವಾತ ಹಣದಲ್ಲಿಯೇ ಸೌಂದರ್ಯ ಹಾಗೂ ಶಕ್ತಿಯನ್ನು ಅರಸುತ್ತಾನೆಯೋ ಆತ ಜೀವನ ವ್ಯಾಪಾರವನ್ನು ಬಹಳ ಚಾಣಾಕ್ಷತನ ದಿಂದ ಮಾಡುತ್ತಾನೆ. ಆದರೆ ಪೂರ್ಣವಾಗಿ ಮೂಲಧನವನ್ನೇ ಕಳೆದುಕೊಳ್ಳುತ್ತಾನೆ. ಯಾವನು ಖಡ್ಗದಲ್ಲಿ ಶಕ್ತಿ ಮತ್ತು ಸೌಂದರ್ಯವನ್ನು ಕಾಣುತ್ತಾನೋ ಅವನು ಹೋರಾಡುತ್ತಾನೆ, ಕೊಲ್ಲುತ್ತಾನೆ, ಮತ್ತು ಸುಲಭವಾಗಿ ಕೊಲ್ಲಲ್ಪ ಡುತ್ತಾನೆ."

ಶಿಷ್ಯರೆಲ್ಲ ಒಂದೆರಡು ಕ್ಷಣ ದಿಗ್ಭ್ರಾಂತರಾಗಿ ಕುಳಿತರು. ಒಬ್ಬ ಶಿಷ್ಯ ಮೇಲೆದ್ದು ಮೃದು ಧ್ವನಿ ಯಲ್ಲಿ ಪ್ರಶ್ನಿಸಿದ, "ಹಾಗಿದ್ದರೆ ಪ್ರಶ್ನೆಗೆ ಸರಿಯಾದ ಉತ್ತರ ಯಾವುದು ಗುರುದೇವ?"

"ಮಣ್ಣು" ಗುರು ತಡವಿಲ್ಲದೆ ಉತ್ತರಿಸಿದ. ಶಿಷ್ಯರೆಲ್ಲ ಆಶ್ಚರ್ಯಚಕಿತರಾದರು.

ಗುರುವಿನ ವಿಶಾಲ ನಯನಗಳು ಮತ್ತೊಮ್ಮೆ ಹಿಮಾಚ್ಛಾದಿತ ಪರ್ವತದ ಮೇಲೆ, ಜಿಂಕೆಗಳು ನೆಗೆದು ಆಡುತ್ತಿದ್ದ ಹಸಿರು ಹುಲ್ಲಿನ ಬಯಲಿನ ಮೇಲೆ ಓಡಾಡಿದುವು. ಎಲೆಗಳ ಮರೆಯಲ್ಲಿ ಗಿಳಿ ಗಳು ಹಾಡುತ್ತಿದ್ದುದನ್ನು ಆತ ಆಲಿಸಿದ, ಆಗ ಶಿಷ್ಯರು ಅವಸರದಿಂದ ತಾಳೆಯೋಲೆಯ ಮೇಲೆ 'ನಾರಾಯ' ಹಿಡಿದ ಪ್ರಕೃತಿಯಿಂದ ಕಲಿತ ಪಾಠ ವನ್ನೇ ಬರೆಯುತ್ತಿದ್ದರು.

# ಇಂಥಾ ಜನರು ಇನ್ನೆಲ್ಲಿ ಸಿಕ್ಕಾರು?

ಎರಡನೆ ಮಹಾಯುದ್ಧದ ಉರಿ ಭುಗಿಲ್ಲೆಂದು ಏಳುತ್ತಿದ್ದಾಗ, ಯುದ್ಧ ನಿಧಿಗೆ ವರ್ತಕರಿಂದ ಏನಾದರೂ ಸ್ವಲ್ಪ ಹಣವನ್ನು ಕೂಡಿಸಬೇಕೆಂದು ಬಿಹಾರದಲ್ಲಿ ಒಂದು ಜಿಲ್ಲೆಯ ಕಲೆಕ್ಟರ್ ಆದಾಯ ಕರ ಅಧಿಕಾರಿಯನ್ನು ಕೇಳಿಕೊಂಡ. ಹೀಗೆ ಮಾಡುವುದರಿಂದ ತನ್ನ ಕರ್ತವ್ಯದಲ್ಲಿ ಚ್ಯುತಿಯುಂಟಾಗುವುದೆಂಬ ವಿಚಾರ ಆ ಅಧಿಕಾರಿಗೆ ಬಂತು. ಆದರೂ, ಹೀಗೆ ಹಣವನ್ನು ಕೂಡಿಸಿ ಕೊಡಲು ಸರಕಾರೀ ನೀತಿಸಂಹಿತೆಯಲ್ಲಿ ಏನಾದರೂ ಅವಕಾಶವುಂಟೆ? ಎಂದಾತ ನೀತಿಸಂಹಿತೆಯನ್ನು ತಿರುವಿ ಹಾಕಿದ. ಆದರೆ ಪ್ರಶ್ನೆ ಬಗೆ ಹರಿಯಲಿಲ್ಲ. ಕೂಡಲೆ ಆತ ಈ ಬಗ್ಗೆ ಆದಾಯ ಕರ ಕಮೀಶನರನಲ್ಲಿ ಈ ವಿಷಯವನ್ನು ಪ್ರಸ್ತಾಪಿಸಿ, ತಾವು ಚಂದಾ ಎತ್ತಬಹುದೆಂದು ಸಲಹೆ ನೀಡಿದರೆ ಮಾತ್ರ ಹಾಗೆ ಮಾಡುವುದಾಗಿ ಕಲೆಕ್ಟರನಿಗೆ ತಿಳಿಸಿದ. ಆದಾಯ ಕರ ಕಮೀಶನರನು ಕಲೆಕ್ಟರನ ಸಲಹೆ ಸಾಧುವಾದುದೆಂದು ಭಾವಿಸಲಿಲ್ಲ. ಆಗ ಕಲೆಕ್ಟರನು ಈ ವಿಷಯವನ್ನು ಗವರ್ನರರನ ಗಮನಕ್ಕೆ ತಂದ. ಆಗ ಗವರ್ನರರನು ಆದಾಯ ಕರ ಕಮೀಶನರನನ್ನು ಕರೆಸಿ, ಪರಿಸ್ಥಿತಿ ಎಷ್ಟು ಗಂಭೀರವಾಗಿದೆಯೆಂಬುದನ್ನು ತಿಳಿಸಿ, ಒಂದು ಒಳ್ಳೆಯ ಕೆಲಸಕ್ಕೆ ಸಹಾಯ ಮಾಡಲು ಹಿಂದೆಗೆಯಬಾರದೆಂದು ಕಳಕಳಿಯಿಂದ ವಿನಂತಿಸಿ ಅವನ ಮನವನ್ನು ಒಲಿಸಲು ಪ್ರಯತ್ನಿಸಿದ. ಆದರೆ ಆ ಅಧಿಕಾರಿಯ ನಿರ್ಧಾರ ಅಚಲವಾಗಿತ್ತು. ಕೊನೆಗೆ ಈ ಬಗ್ಗೆ ಗವರ್ನರನು ವೈಸರಾಯರಿಗೂ ಆದಾಯ ಕರ ಕಮೀಶನರನು ಅರ್ಥ ಮಂತ್ರಿಗೂ ಪತ್ರ ಬರೆದರು. ವೈಸ್‌ರಾಯನು ಗವರ್ನರನನ್ನು ಎತ್ತಿ ಹಿಡಿಯುವುದು ಸ್ವಾಭಾವಿಕವೆಂದು ಯಾರಾದರೂ ಭಾವಿಸಬಹುದು. ಆದರೆ ಆಗ ನಡೆದದ್ದು ಬೇರೆಯೆ. ಉದ್ದೇಶ ಎಷ್ಟೇ ಒಳ್ಳೆಯದಾಗಿರಲಿ, ಅದಕ್ಕಾಗಿ ಈ ಕ್ರಮದಿಂದ ಸರಕಾರದ ಆದಾಯಕ್ಕೆ ಧಕ್ಕೆ ಬರಬಹುದಾದ್ದರಿಂದ ಆದಾಯ ಕರ ಅಧಿಕಾರಿಯ ನಿಲುವೇ ಸಾಧುವೆಂದು ಅರ್ಥಮಂತ್ರಿಯ ಅಭಿಪ್ರಾಯ ಬಂತು. ಈ ನಿಲುವೇ ಸರಿ ಎಂದು ಹೇಳಿ ವೈಸ್‌ರಾಯನು ಗವರ್ನರನ ಬೇಡಿಕೆಯನ್ನು ತಿರಸ್ಕರಿಸಿದ.

ಪತ್ರಿಕೆಗಳಲ್ಲಿ ಅಂತುಲೆ ಪ್ರಕರಣದ ಬಗ್ಗೆ ಬಿಸಿಬಿಸಿಯಾಗಿ ಚರ್ಚೆಯಾಗುತ್ತಿದ್ದಾಗ ಮೇಲೆ ಹೇಳಿದ ಪ್ರಕರಣಕ್ಕೆ ನೇರವಾಗಿ ಸಂಬಂಧಿಸಿದ ಅಧಿಕಾರಿ ಹೇಳಿದ ಈ ಪ್ರಸಂಗ ತಂತಾನೆ ನೆನಪಿಗೆ ಬಂತು.

—ಎಚ್. ಎ. ಶಾಹ

('ಓಪೀನಿಯನ್' ಪತ್ರಿಕೆಯಿಂದ)

ಬಳಸುತ್ತಿರಬಹುದು. ಆದರೆ ರಂಧ್ರಗಳಿಲ್ಲದ ಅಗಲ ತಲೆಯುಳ್ಳ ಸೂಜಿಗಳನ್ನು ಕೇವಲ ಅಕ್ಯುಪಂಕ್ಚರಿಗಾಗಿಯೇ ಬಳಸುತ್ತಿದ್ದರು. ಸುಮಾರು ೫೦೦೦ ವರ್ಷಗಳಿಂದ ಅಕ್ಯುಪಂಕ್ಚರ್ ಚೀನದಲ್ಲಿ ಬಳಕೆಯಲ್ಲಿದೆ. ಆದಾಗ್ಯೂ ಧಾತುವಿನ ಸೂಜಿಯು ಚೀನದಲ್ಲಿ ಸುಮಾರು ಕ್ರಿ. ಶ. ಪೂ. ೨ನೇ ಶತಮಾನದಲ್ಲಿ ದೊರಕಿತು.

ನಮ್ಮ ಭಾರತೀಯ ಆಯುರ್ವೇದದಲ್ಲಿ ಹಲವು ಪ್ರಕಾರದ ಸೂಜಿಗಳ ಉಲ್ಲೇಖವಿದೆ. ಸೂಜಿ ಪ್ರಕಾರಗಳು, ವಿವಿಧ ಉದ್ದಳತೆಯುಳ್ಳ ಧಾತು ತುದಿಯ ಸೂಜಿಗಳು, ವಿಶೇಷ ಸೂಜಿಗಳು, ಸೂಜಿಯ ಸಮುಚ್ಚಯಗಳು, ಸೂಜಿ ಸಂಗ್ರಹಣ, ಸೂಜಿ ಮೊನಚುಗೊಳಿಸುವಿಕೆ, ಸೂಜ ಬಳಸುವಿಕೆ, ಮುಖ್ಯ ಉಪಕರಣವಾಗಿ ಸೂಜಿಗಳು–ಹೀಗೆ ಹಲವು ಗ್ರಂಥಗಳಲ್ಲಿ ವಿವರಣೆ ಸಿಗುತ್ತವೆ.

ಅ) ಸೂಜಿಯ ಪ್ರಕಾರಗಳು: ನೇರ ಹಾಗೂ ವಕ್ರ ಸೂಜಿಗಳು: ಗಟ್ಟಿ ಹಾಗೂ ಟೊಳ್ಳಾದ ಸೂಜಿಗಳು: ರಂಧ್ರವುಳ್ಳ ಹಾಗೂ ರಂಧ್ರರಹಿತ ಸೂಜಿಗಳ ವಿವರಣೆಗಳಿವೆ.

ಆ) ವಿವಿಧ ಅಳತೆಯ ಸೂಜಿಗಳು: ಅರ್ಧ ಬೆರಳಿನಿಂದ ಹಿಡಿದು ಎಂಟು ಬೆರಳಿನ ವರೆಗಿನ (೧ ಸೆಂಟಿ ಮೀಟರಿನಿಂದ ೧೨ ಸೆಂಟಿ ಮೀಟರ್) ಉದ್ದಳತೆಯುಳ್ಳ ಸೂಜಿಗಳ ವರ್ಣನೆ ಆಯುರ್ವೇದದಲ್ಲಿದೆ.

ಇ) ವಿವಿಧ ಧಾತುಗಳ ಸೂಜಿಗಳು: ಆಯುರ್ವೇದ ಗ್ರಂಥಗಳಲ್ಲಿ ಬಂಗಾರ, ಬೆಳ್ಳಿ, ಕಂಚು, ಹಿತ್ತಾಳೆ, ಉಕ್ಕು ಕಬ್ಬಿಣ ಇತ್ಯಾದಿ ಧಾತುಗಳಿಂದ ತಯಾರಿಸಲ್ಪಟ್ಟ ಸೂಜಿಗಳ ವರ್ಣನೆಯಿದೆ.

ಈ) ವಿವಿಧ ತುದಿಯ ಸೂಜಿಗಳು: ಗೋಲಾಕಾರದ ಮತ್ತು ಚೂಪಾದ ತುದಿಗಳನ್ನೂ ಅಕ್ಯುಪಂಕ್ಚರಿಗಾಗಿ ಬಳಸುತ್ತಿದ್ದರು. ರಕ್ತ-ಸ್ರಾವಕ್ಕೆ (Blood-letting) ರಕ್ತನಾಳಗಳಿಗೆ ಚುಚ್ಚುವುದಕ್ಕೆ (Venous Articus) ತ್ರಿಕೋಣದ ತುದಿಗಳ (Triangular) ಸೂಜಿಗಳನ್ನು ಬಳಸುತ್ತಿದ್ದರು.

ಉ) ವಿಶೇಷ ಸೂಜಿಗಳು: ವೇಧನ, ತಾಡನ ಅಥವಾ ಕರ್ಣವೇಧನಕ್ಕಾಗಿ ವಿಶೇಷ ಸೂಜಿಗಳನ್ನು ಬಳಸುತ್ತಿದ್ದರೆಂಬ ಅಂಶಗಳ ಉಲ್ಲೇಖ ಹಾಗೂ ವಿವರಣೆ ಆಯುರ್ವೇದದಲ್ಲಿದೆ.

ಊ) ಸೂಜಿ ಸಮುಚ್ಚಯಗಳು: ಈ ಸೂಜಿ ಸಮುಚ್ಚಯಗಳಿಗೆ ಹಿಡಿಕೆಗಳಿರುತ್ತವೆ. ಮೂರರಿಂದ ಎಂಟರವರೆಗೆ ಸೂಜಿಗಳಿರಬಹುದು. ಅವುಗಳ ಉದ್ದಳತೆ ೧ ಸೆಂಟಿ ಮೀಟರಿನಿಂದ ೧೦ ಸೆಂಟಿ ಮೀಟರು. ಅವುಗಳ ಆಕಾರಗಳು ವಿವಿಧ ರೀತಿಯಲ್ಲಿವೆ; ಕೂರ್ಚ, ತ್ರಿಕೂರ್ಚಕ ಸೂಜಿ-ಕೂರ್ಚ, ಬಿಜ ಇತ್ಯಾದಿ.

ಋ) ಸೂಜಿಯ ಗುಣಧರ್ಮಗಳು: ಉದ್ದಳತೆ ಮೊನಚು, ತೀಕ್ಷ್ಣತಾ. ಏಕಪ್ರಕಾರದ ಆಕಾರ ಹಿಡಿಕೆಯುಳ್ಳ, ಸೂಜಿ ನಿರ್ಮಾಣಕ್ಕಾಗಿ ಕಟ್ಟುನಿಟ್ಟಾದ ನಿಯಮಗಳನ್ನು ಸೂಚಿಸಲಾಗಿದೆ. ಇವರಿಂದ ಸೂಜಿಗಳ ಮಹತ್ವದ ಅರಿವು ಉಂಟಾಗದೇ ಇರದು.

ಎ) ಸೂಜಿ ಸಂಗ್ರಹಣ: ವೈದ್ಯಕೀಯ ಉಪಕರಣ ಸಂಗ್ರಹಣ ಮಾಡುವ ಉಪಕರಣಗಳ ಪಟ್ಟಿಗೆಗೆ ಆಯುರ್ವೇದದಲ್ಲಿ 'ಶಸ್ತ್ರಕೋಶ'ದೆಂದು ಕರೆಯಲಾಗಿದೆ. ವಿಶೇಷ ಸಂಗ್ರಹಣಾ ವಿಭಾಗವನ್ನು ಕೇವಲ ಸೂಜಿಗಳನ್ನು ಇಡುವುದಕ್ಕಾಗಿ ಬಳಸಲಾಗುತ್ತಿತ್ತು. ಇವುಗಳನ್ನು 'ಸೂಜಿ ಪಿಪ್ಪಲಕ' ಮತ್ತು 'ಸೂಜಿ ಸ್ಥಾಪನಪತ್ರ'ವೆಂದೇ ಕರೆಯಲಾಗುತ್ತಿತ್ತು. ಇದೇ ಮಾದರಿಯ 'ಸೂಜಿ ಸಂಗ್ರಹಣಾ ಕೋಶ'ವು ಆಧುನಿಕ ಅಕ್ಯುಪಂಕ್ಚರಿನಲ್ಲಿ ಬಳಕೆಯಲ್ಲಿದೆ.

ಏ) ಸೂಜಿ ಮೊನಚುಗೊಳಿಸುವಿಕೆ: ಶಸ್ತ್ರ ಚಿಕಿತ್ಸಾ ಉಪಕರಣಗಳನ್ನು ನಿಯಮಿತವಾಗಿ ಮೊನಚುಗೊಳಿಸಬೇಕಾಗುತ್ತದೆ. 'ನಿಶಾತಾಸಿ' ಎಂಬ ಕಲ್ಲನ್ನೂ 'ಶಾಲ್ಮಲೀ ಫಲಕ'ವೆಂಬ ಹಲಿಗೆಯ ತುಂಡನ್ನೂ ಉಳಿದ ಉಪಕರಣ ಹಾಗೂ ಸೂಜಿಗಳನ್ನೂ ಮೊನಚುಗೊಳಿಸುವುದಕ್ಕಾಗಿ ಬಳಸಲಾಗುತ್ತಿತ್ತು.

ಐ) ಸೂಜಿ ಬಳಸುವಿಕೆ: ಸೂಜಿಗಳನ್ನು ಹೇಗೆ ಬಳಸಬೇಕೆಂಬ ಪ್ರಾಯ ಬಗ್ಗೆ ವಿಶೇಷವಾದ ವಿಸ್ತೃತಿಕೆಯನ್ನು ಆಯುರ್ವೇದದಲ್ಲಿ ನೀಡಲಾ

ಚ್ಚಯಗಳು ಸೂಜಿಯ ಕ್ರಿಯಾ ವಿಧಾನ ರೋಗಗಳ ಸೂಚನೆ, ಸೂಜಿ ಬಿಂದುಗಳು, ಕಾವ ಸೂಜಿಯ ಬಳಕೆ ಹಾಗೂ ಇನ್ನುಳಿದ ಅಕ್ಯುಪಂಕ್ಚರಿನ ವಿಧಾನಗಳಾದ ರಕ್ತಸ್ರಾವ, ಹಬೆಯೊಡಿಸುವಿಕೆ ಮತ್ತು ಪ್ರಾಚ್ಯ ಸಂಶೋಧನಾ ಪುರಾವೆಗಳು- ಇತ್ಯಾದಿ ದೃಷ್ಟಿಕೋನಗಳಿಂದ ಎರಡರಲ್ಲಿಯೂ ಸಾಮ್ಯ ಕಂಡು ಬರುತ್ತದೆ.

೧) ಇತಿಹಾಸ: ಸುಮಾರು ೨೦೦೦ ವರ್ಷಗಳಿಗಿಂತ ಹೆಚ್ಚು ಇತಿಹಾಸ ಹೊಂದಿದ ಚೀನ ಅಕ್ಯುಪಂಕ್ಚರ್ ಇಳಿಕೆ ಹಾಗೂ ಏರಿಕೆಯ ಸುದೀರ್ಘವಾದ ಪ್ರಯಾಣವನ್ನು ಕೈಕೊಂಡಿದೆ. ಬ್ರಿಟಿಶರ ಆಳಿತದ ಕಾಲದಲ್ಲಿ ಈ ಪದ್ಧತಿಯನ್ನು ನಿಷೇಧಿತವಾಗಿತ್ತು. ಇಷ್ಟಾದರೂ ಚೀನದ ಗ್ರಾಮೀಣ ಪರಿಸರದಲ್ಲಿ ಹಲವು ತಲೆಮಾರುಗಳವರೆಗೆ ಇದು ರೂಢಿಯಲ್ಲಿತ್ತು.

ಇದೇ ರೀತಿ ಆಯುರ್ವೇದದ ಪ್ರಾಚೀನತೆ ೨೦೦೦ ವರ್ಷಕ್ಕಿಂತಲೂ ಪೂರ್ವದ್ದು. ಇದೂ ಸಾಕಷ್ಟು ಏರಿಳಿತ ಹೊಂದಿ ಭಾರತೀಯ ಹಳ್ಳಿಗಳಲ್ಲಿ ತಲೆತಲಾಂತರಗಳವರೆಗೆ ತನ್ನ ಅಸ್ತಿತ್ವವನ್ನು ಕಾಯ್ದುಕೊಂಡಿತ್ತು. ಇಂದಿಗೂ ಭಾರತೀಯ ಗ್ರಾಮಗಳಲ್ಲಿ ಇದು ಜೀವಂತವಾಗಿದೆ. ಚೀನ ವೇಧನ ಉಲ್ಲೇಖ ಮಹಾಭಾರತ, ಮನುಸ್ಮೃತಿ, ಕೌಟಿಲ್ಯನ ಅರ್ಥ ಶಾಸ್ತ್ರಗಳಲ್ಲಿ ದಾಖಲಾಗಿದೆ. ಈ ಗ್ರಂಥಗಳೆಲ್ಲವೂ ೨೦೦೦ ವರ್ಷಗಳಿಗಿಂತಲೂ ಪ್ರಾಚೀನ.

೨) ಪ್ರಾಚೀನ ಗ್ರಂಥ: ೧೮ ನೇ ಶತಮಾನದ ತನಕ ೨೦೦೦ ವರ್ಷ ಪುರಾತನವಾದ ಚೀನದ ಗ್ರಂಥಗಳು ಸಿಕ್ಕಿವೆ.

ಅ) Common Medicine–2nd B. C. to 2nd A. D.

(ಬ) A classic of Acupuncture and Moxibition 3rd A. D.

(ಕ) Materia Medica 15th A. D. ಇತ್ಯಾದಿಗಳಿವೆ.

ಆಯುರ್ವೇದ ಗ್ರಂಥಗಳು:– i) ಚರಕ ಸಂಹಿತಾ, ಸುಶ್ರುತ ಸಂಹಿತಾ, ಅಷ್ಟಾಂಗ ಹೃದಯ, ಅಷ್ಟಾಂಗ ಸಂಗ್ರಹ–3rd B. C. to 3rd A. D.

ii) ಶಾರಂಗಧಾರ ಸಂಹಿತಾ–12th A. D.

iii) ಭಾವ ಪ್ರಕಾಶ– 17th A. D. ಇತ್ಯಾದಿಗಳು.

ಭಾರತ–ಚೀನಗಳ ಸಂಬಂಧವನ್ನು ಖಚಿತವಾಗಿ ಸೂಚಿಸುವುದು ಅಸಾಧ್ಯ. ಅಕ್ಯುಪಂಕ್ಚರ್ ಚೀನದಿಂದ ಭಾರತಕ್ಕೆ ಬಂದಿದೆ ಎಂಬುದು ಕೇವಲ ಹೇಳಿಕೆ. ಆದರೆ ಬೌದ್ಧ ಸಂನ್ಯಾಸಿಗಳ ಸಹಾಯದಿಂದ ಅಕ್ಯುಪಂಕ್ಚರ್ ಭಾರತದಿಂದ ಚೀನಕ್ಕೆ ಪ್ರಸಾರಗೊಂಡಿತೆಂಬ ಅಭಿಪ್ರಾಯವೂ ಇದೆ. ಬೌದ್ಧ ಸಂನ್ಯಾಸಿಗಳು ಇಲ್ಲಿಯ ವಿಧಾನಗಳನ್ನೂ ಗ್ರಂಥಗಳನ್ನೂ ತಮ್ಮೊಂದಿಗೆ ಒಯ್ದ ವಿಷಯವಂತೂ ಸತ್ಯ. ನಾನು ಆಯುರ್ವೇದದಲ್ಲಿಯ 'ವೇಧನ' ಎಂಬ ವಿಷಯ ಕುರಿತು ಇನ್ನೂ ಆಳವಾದ ಅಭ್ಯಾಸ ನಡೆಸಿದ್ದೇನೆ. ಅವನ್ನು ಗ್ರಂಥ ರೂಪದಲ್ಲಿ ತರುವ ವಿಚಾರವೂ ಇದೆ. ಸದ್ಯಕ್ಕೆ ಇತಿಹಾಸಕಾರರೇ ಖಚಿತವಾದ ಉತ್ತರ ನೀಡಬಹುದೇನೋ.

ಚೀನದ ಗ್ರಂಥಗಳಂತೆ ಆಯುರ್ವೇದ ಗ್ರಂಥಗಳೂ ವಿವರಣಾತ್ಮಕ ಹಾಗೂ ಸಂಭಾಷಣೆಯ ಮಾದರಿಯಲ್ಲಿವೆ.

೩) ಪ್ರಾಚೀನ ಸೂಜಿಗಳು: ಚೀನದಲ್ಲಿ ಪ್ರಾಚೀನಕಾಲದಲ್ಲಿ ಚೂಪಾದ ಕಲ್ಲು, ಬಿದಿರಿನ ಕೋಲನ್ನು ಉಪಯೋಗಿಸಿದಂತೆ, ಪ್ರಾಚೀನ ಭಾರತದಲ್ಲೂ (ಜಂಬೂಷ್ಟ) ವಿಶೇಷ ಕಲ್ಲು, ಆಕಳಿನ ಹಲ್ಲು, ಬಾಣಗಳು. ಆನೆ ಉಬ್ಬುಗಳನ್ನು ಇದಕ್ಕಾಗಿ ಬಳಸುತ್ತಿದ್ದರು.

೪) ಧಾತುವಿನ ಸೂಜಿಗಳು: ಚೀನದಲ್ಲಿ ಬಳಸುತ್ತಿದ್ದ ಬಂಗಾರ, ಬೆಳ್ಳಿ, ಬತ್ತಾಳಿ, ಉಕ್ಕಿನ ಸೂಜಿಗಳು ಕ್ರಿ. ಪೂ. ೨ನೇ ಶತಮಾನದಲ್ಲಿ ಹೊಪೆಯ ಉತ್ಖನನದ ಕಾಲಕ್ಕೆ ಉಪಲಬ್ಧಗೊಂಡವು. ಆಯುರ್ವೇದದಲ್ಲೂ ಇಂಥ ಧಾತುಗಳ ಸೂಜಿಯ ಉಲ್ಲೇಖವಿದ್ದು, ತಕ್ಷಶಿಲಾ ಉತ್ಖನನದ ಕಾಲಕ್ಕೆ ಕ್ರಿ. ಶ. ಪೂ. ೩ನೇ ಶತಮಾನದ ಸೂಜಿಗಳು ಸಿಕ್ಕಿವೆ.

೫) ಸೂಜಿ ಸಮುಚ್ಚಯಗಳು: ಥೀಸಾರ್ಸ್,

ಫೈವ್‌ಸ್ಟಾರ್, ಸೆವೆನ್‌ಸ್ಟಾರ್ ಸೂಜಿ ಸಮುಚ್ಚಯಗಳನ್ನೇ (Plum-blossom needle) ಆಯುರ್ವೇದದಲ್ಲಿ ಕೂರ್ಚ, ತ್ರಿಕೂರ್ಚ, ಸೂಚಿಕೂರ್ಚ. ಬಿಜ ಇತ್ಯಾದಿಗಳಿಗೆ ಹೆಸರಿಸಿದ್ದಾರೆ.

೬) ಸೂಜಿಯ ಕ್ರಿಯೆಗಳು: ಚುಚ್ಚುವಿಕೆ, ಗೀರುವಿಕೆ, ತಿರುಗಿಸುವಿಕೆ, ಕಡೆಯುವಿಕೆ, ಕುಟ್ಟುವಿಕೆ, ಇತ್ಯಾದಿ ಚೀನದ ಸೂಜಿಗಳ ಕ್ರಿಯೆಗಳನ್ನು ಆಯುರ್ವೇದದಲ್ಲಿ ಅನುಕ್ರಮವಾಗಿ ವೇಧನ, ವಿಸ್ರಾವಣ, ಮಥನ, ಕುಟ್ಟನಗಳೆಂದು ಕರೆಯುತ್ತಾರೆ.

೭) ರೋಗಗಳ ಸೂಚನೆ: ಚೀನದ ಅಕ್ಯುಪಂಕ್ಚರಿನಲ್ಲಿ ಸೂಚಿಸಲಾದ ರೋಗಗಳನ್ನು ಆಯುರ್ವೇದದಲ್ಲಿ ಈ ಕೆಳಗಿನಂತೆ ಗುರುತಿಸಬಹುದು— Alcohol toxaemia = ಮದಾತ್ಯಯ; Coma = ಸಂನ್ಯಾಸ; Delirium = ಉನ್ಮಾದ; Hicup = ಹಿಕ್ಕಾ; Hairfall = ಕೇಶ-ಶಾತನ; Alopetia = ಇಂದ್ರಲುಪ್ತ; Vitiligo = ಶ್ವಿತ್ರ; Black patches on Skin = ನೀಲಿಕಾ.

೮) ಅಕ್ಯುಪಂಕ್ಚರ್ ಬಿಂದುಗಳು: ಅತಿನಿದ್ರೆ (Coma) ಹಾಗೂ ಆಘಾತದ ರೋಗಗಳಿಗೆ ಚೀನದ ಅಕ್ಯುಪಂಕ್ಚರಿನಲ್ಲಿ ಬಳಸಿಕೊಳ್ಳುವ ಬಿಂದುಗಳಾವುವೆಂದರೆ— L-ll, LI-l, St-4, UB-67, Tw-l, GB-44 ಮತ್ತು Liv-l ಇದಕ್ಕೆ ಪೂರಕವಾಗಿ ಆಯುರ್ವೇದದಲ್ಲಿ ನಖಾಭ್ಯಂತರ(nail-bed)ವನ್ನು ಸೂಚಿಸಲಾಗಿದೆ.

ಅಕ್ಯುಪಂಕ್ಚರಿನ P-9, Ex-30 ಬಿಂದುಗಳನ್ನೂ ಆಯುರ್ವೇದದಲ್ಲಿ ನಖಾಂತರೆ, ನಖಾಂತೆಯೆನ್ನೂ ಸೂಚಿಸಲಾಗಿದೆ. ಮೇಲೆ ಸೂಚಿಸಿದವುಗಳೆಲ್ಲ ಅಂಚಿನಲ್ಲಿರುವ ಬಿಂದುಗಳು. ಸ್ಥಾನಿಕ ಬಿಂದುಗಳನ್ನು ಕೂದಲುದುರುವಿಕೆಗೆ, ಇಂದ್ರಲುಪ್ತ, ನೀಲಿಕಾ ಇತ್ಯಾದಿ ರೋಗಕ್ಕೆ ಬಳಸುತ್ತಾರೆ.

೯) ಬರೆಹಾಕುವಿಕೆ (ಸುಡು ಮುದ್ರೆ ವಿಧಾನ):

ಅಕ್ಯುಪಂಕ್ಚರಿನಲ್ಲಿದೆ. ಸೂಜಿಗಳಿಂದ, ಶುಂಠಿ (Ginger), ಬೆಳ್ಳುಳ್ಳಿ (Garlic) ಪ್ರಯೋಗಿಸಬಹುದು. ಇವನ್ನೇ ಅಗ್ನಿಕರ್ಮವೆಂಬ ಹೆಸರಿನಿಂದ ಆಯುರ್ವೇದದಲ್ಲಿ ಬಳಸಲಾಗಿದೆ. ಮೇಣ, ಜೇನುತುಪ್ಪ ಇತ್ಯಾದಿಗಳೊಂದಿಗೆ ಇವನ್ನು ಪ್ರಯೋಗಿಸಲಾಗುವುದು. ಇದರಲ್ಲಿ ಎರಡು ವಿಧಾನ— ಕಲೆಯುಳ್ಳ (Scarring); ಮತ್ತು ಕಲೆರಹಿತ (non-searring).

೧೦) ಇನ್ನಿತರ ವಿಧಾನಗಳು: ರಕ್ತಸ್ರಾವವು ಆಯುರ್ವೇದ ಭಾಷೆಯಲ್ಲಿ ರಕ್ತಮೋಕ್ಷಣ ರಕ್ತಸ್ರುತಿ. ಸಿರಾವೇಧನವೆಂದು ಕರೆಯಲಾಗಿದೆ. ಅಕ್ಯುಪಂಕ್ಚರಿನಲ್ಲಿ ರಕ್ತಸ್ರಾವಕ್ಕೆ ಬಳಸುವ ಸೂಜಿಗಳನ್ನೇ ಆಯುರ್ವೇದದಲ್ಲಿ ಸೂಚಿಸಲಾಗಿದೆ. ಇಷ್ಟಲ್ಲದೆ ಬೇರೆ ಬಗೆಯ ಉಪಕರಣ ಹಾಗೂ ವಿಧಿಗಳ ವಿವರಣೆಯು ಆಯುರ್ವೇದದಲ್ಲಿ ಹೇಳಲ್ಪಟ್ಟಿದೆ.

ಬಟ್ಟಿ ಹಾಕುವಿಕೆ: ಇದು ಆಯುರ್ವೇದದ ಅಲಾಬು. ಶೃಂಗ ಇತ್ಯಾದಿಗೆ ಅಕ್ಯುಪಂಕ್ಚರಿನಲ್ಲಿ



# ಮತ್ತೊಬ್ಬ ಗೊಮ್ಮಟ!

ಜಿತೇಂದ್ರಿಯನಾದ ಬಾಹುಬಲಿಗೆ ಜೈನರ ಧಾರ್ಮಿಕ ಇತಿಹಾಸದಲ್ಲಿ ತುಂಬ ಮಹತ್ವವಿದೆ. ಸಾವಿರ ವರ್ಷಗಳ ಹಿಂದೆ ಶ್ರವಣಬೆಳಗೊಳದಲ್ಲಿ ಎದ್ದು ನಿಂತ ಬಾಹುಬಲಿಯ ಭವ್ಯ ವಿಗ್ರಹದ ನಂತರ ಅಂಥ ವಿಗ್ರಹಗಳನ್ನು ಜೈನರು ಅಲ್ಲಲ್ಲಿ ಸ್ಥಾಪಿಸುತ್ತಲೇ ಬಂದಿದ್ದಾರೆ. ಆದರೆ ಗಾತ್ರದಲ್ಲಿಯೂ ಶಿಲ್ಪಸೌಂದರ್ಯದಲ್ಲಿಯೂ ಶ್ರವಣಬೆಳಗೊಳದ ಗೊಮ್ಮಟವನ್ನು ಮೀರಿಸುವ ವಿಗ್ರಹವಿನ್ನೂ ಮೈದಳೆದಿಲ್ಲ.

ಗೊಮ್ಮಟನನ್ನೋ, ಗೋಲಗುಮ್ಮಟವನ್ನೋ, ದೇಶದಲ್ಲಿಯ ಭವ್ಯ ಮಂದಿರಗಳನ್ನೋ ನೋಡಿದಾಗ ಇಂತಹ ಭವ್ಯ ಶಿಲ್ಪ ಪುರಾತನದ ಸೊತ್ತು: ಆಧುನಿಕರಿಂದ ಆ ಕೌಶಲವೂ ಅದನ್ನು ಕೃತಿಗಿಳಿಸಲು ಅಗತ್ಯವಾದ ಸಮಯ ವ್ಯವಧಾನವೂ ನಶಿಸಿ ಹೋಗಿದೆಯೆಂಬ ಭಾವನೆ ಬಂದುಬಿಡುತ್ತದೆ. ಆದರೆ ಇಂದು ದಕ್ಷಿಣ ಕನ್ನಡ ಧರ್ಮಸ್ಥಳದಲ್ಲಿ ನಡೆಯುತ್ತಿರುವುದನ್ನು ನೋಡಿದರೆ ನಮ್ಮಲ್ಲಿ ಆ ಕಲಾನೈಪುಣ್ಯವಿನ್ನೂ ಜಾಗೃತವಿದೆ, ಅದಕ್ಕಾಗಿಯೇ ಸಮಯವನ್ನು ಮೀಸಲಿಡಬಲ್ಲವರೂ ಇದ್ದಾರೆಂಬುದು ತಟ್ಟನೆ ಗಮನಕ್ಕೆ ಬರುತ್ತದೆ. ಶ್ರೀ ರಂಜಾಳ ಗೋಪಾಲ ಶೆಣೈಯವರು ಅಂತಹ ಶಿಲ್ಪಿ. ಈ ಹಿಂದೆಯೇ 'ಕಸ್ತೂರಿ'ಯು ಈ ಹಿರಿಯ ಕಲಾವಿದನನ್ನು ತನ್ನ ಓದುಗರಿಗೆ ಪರಿಚಯಿಸಿದೆ.

ಸ್ಥೂಲವಾಗಿ ಶ್ರವಣಬೆಳಗೊಳದ ಗೊಮ್ಮಟನನ್ನೇ ಅನುಕರಿಸಿದರೂ ಭವ್ಯತೆಯಲ್ಲಿ ಸ್ವಲ್ಪ ಚಿಕ್ಕದೆನಿಸುವ ಈ ಬಾಹುಬಲಿಯನ್ನು ರೂಪಿಸಿದವರು ಅವರು–ಧರ್ಮಸ್ಥಳದ ಧರ್ಮಾಧಿಕಾರಿಗಳಾಗಿದ್ದ ದಿ. ರತ್ನವರ್ಮ ಹೆಗ್ಗಡೆಯವರ ಇಚ್ಛೆಯಂತೆ.

ಇಂದು ಈ ಮೂರ್ತಿ ಪ್ರತಿಷ್ಠಾಪಿಸಲ್ಪಡುವುದನ್ನು ನೋಡಲು ರತ್ನವರ್ಮರು ಉಳಿದಿಲ್ಲ. ಶ್ರೀ ವೀರೇಂದ್ರ ಹೆಗ್ಗಡೆ ಆ ಕಾರ್ಯವನ್ನು ಈಗ ಪೂರಯಿಸುತ್ತಿದ್ದಾರೆ.

ಭಾರತದ ಜೈನರಲ್ಲಿ ಸನಾತನತೆ ಎಷ್ಟು ಬಲವಾಗಿ ಬೇರೂರಿದೆಯೆಂಬುದನ್ನು ಅರಿಯಬೇಕಿದ್ದರೆ ನಾವು ಈ ಉತ್ಸವವನ್ನು ನೋಡಬೇಕು.

(ಚಿತ್ರಕ್ಕಾಗಿ ೨೪-೨೫ನೇ ಪುಟ ನೋಡಿರಿ)



ಬಾಹುಬಲಿಯಂ ಪಾದಗಳನ್ನು ಕೆತ್ತುತ್ತಿರುವ ಶಿಲ್ಪಿ



ಇನ್ನೂ ಪ್ರತಿಷ್ಠಾಪನೆಯ ಹಂತದಲ್ಲಿರುವ ಬಾಹುಬಲಿ



ಬಿಜಾಪುರ ಸ್ಟೇಶನ್ ಬಂದಂಗ ಕಾಣ್ತದ,' [illegible] ಪ್ರೀತಿ ಕಿಡಕಿಯಲ್ಲಿ ಕುಳಿತಲ್ಲೇ ಬಗ್ಗಿ ನೋಡಿದಳು. 'ಅಯ್ಯ, ಯಾರಕಿ ಅಲ್ಲಿ ನಿಂತಾಕಿ? ಎಲ್ಲೋ ನೋಡಿದಂಗದಲ್ಲಾ' ಎಂದುಕೊಳ್ಳುತ್ತ ಪ್ಲಾಟ್‌ಫಾರ್ಮಿನ ಮೇಲೆ ನಿಂತ ಯುವತಿಯತ್ತ ನೋಡಿದಳು. ಸುತ್ತೆಲ್ಲ ಕೆಲ ತರುಣರು ಅವಳೊಂದಿಗೆ ನಗುನಗುತ್ತ ಮಾತಾಡುತ್ತಿದ್ದಾರೆ. ಅವಳನ್ನು ಆರಾಧನಾಭಾವದಿಂದ ನೋಡುತ್ತಿದ್ದಾರೆ. ಅವಳೂ ನಗುತ್ತಿದ್ದಾಳೆ. ಕೊನೆಗೆ ನಿಂತ ಆ ಹುಡುಗ ಅವಳ ಸ್ಲೀವ್‌ಲೆಸ್ ಬ್ಲೌಜ್ ತೊಟ್ಟ

# ಪ್ರಯಾಣ




ಬರಿ ತೋಳನ್ನು ಕಣ್ಣಲ್ಲೇ ಸವರುತ್ತಿದ್ದಾನೆ. 'ಇಕಿನ್ನೆಲ್ಲಿ ನೋಡೀನಿ? ರಶ್ಮಿ ಏನ ಮತ್ತ? ಹೌದೌದು. ಆಕನೇ. ನನ್ನ ಕ್ಲಾಸ್‌ಮೇಟು. ಮೈ ಕೈ ತುಂಬಿಕೊಂಡು ಛಂದಾಗ್ಯಾಳೀಗ. ಕಾದಂಬ್ರಿಗೀದಂಬ್ರೀನೂ ಬರಿತಾಳಂತ. ಹೋಗಿ ಮಾತಾಡ್ಲೇನು?'

ಎಂದು ಪ್ರೀತಿ ಅಂದುಕೊಳ್ಳುವ ಹೊತ್ತಿಗೆ ಅವಳೇ ಇತ್ತ ಬಂದಳು ಪ್ರೀತಿಯ ಕಂಪಾರ್ಟ್‌ಮೆಂಟಿಗೇ. ಖಾಲಿಯಿದ್ದ ಎದುರಿನ ಜಾಗದ ಮೇಲೆ ಕುಳಿತುಕೊಳ್ಳುತ್ತ ಸುತ್ತ ಮುತ್ತ, ಆ ಬದಿಯ ಕಿಡಕಿಯಲ್ಲಿ ಗಂಡನ ಪಕ್ಕ ಕುಳಿತಿದ್ದ ಪ್ರೀತಿಯನ್ನು

ನೋಡಿದಳು. ಪ್ರೀತಿ ನಕ್ಕಾಗ ಇವಳಿಗೆ ಗೊಂದಲವಾಯ್ತು. ತಟ್ಟನೆ ನೆನಪಾಯ್ತು. "ನೀ ಪ್ರೀತಿ ಅಲ್ಲಾ?" ಅಂದಳು ನಗುತ್ತ.

ಪ್ರೀತಿ ನಕ್ಕು, "ನಾ ಆಗ್ಲೆ ನೋಡಿದೆ. ಗುರ್ತ ಸಿಗ್ತದೋ ಇಲ್ಲೋ ಅನ್ನಿಸ್ತು," ಎಂದಳು. ಓದುತ್ತಿದ್ದ ಪುಸ್ತಕದ ಕಡೆಗೊಮ್ಮೆ ರಶ್ಮಿಯ ಕಡೆಗೊಮ್ಮೆ ಕಣ್ಣೋಟ ಬೀರುತ್ತಿದ್ದ ಗಂಡನಿಗೆ ಗೆಳತಿಯ ಪರಿಚಯ ಮಾಡಿಕೊಟ್ಟಳು ಪ್ರೀತಿ. ಆವನು ರಶ್ಮಿಯ ಜೋಳು ಕತ್ತು, ತೋಳು ನೋಡುತ್ತಾ "ನಮಸ್ಕಾರ" ಎಂದು ಮತ್ತೆ ಪುಸ್ತಕದಲ್ಲಿ ತಲೆ ಹಾಕಿದ.

"ಎಲ್ಲಿ ಪ್ರೀತಿ? ಎಷ್ಟು ಮಂದಿ ಮಕ್ಕಳು?" ಎಂದು ವಿಚಾರಿಸಿದಳು ರಶ್ಮಿ.

"ಇವಾ ಒಬ್ನೇವಾ ಮಾರಾಯ್ತಿ, ಇವನೆ ಹತ್ತು ಮಕ್ಕಳ ಗದ್ಲಾ ಮಾಡ್ತಾನ. ಈಗ ಇವ್ರಿಗೆ ಗದಗಿಗೆ ಟ್ರಾನ್ಸಫರ್ ಆಗೇದ. ಅವ್ವನ ಹಂತೇಲಿ ಹೋಗಿದ್ವಿ ಇಂಡಿಗೆ. ಇವ್ರ ರಜಾ ಮುಗದವು. ಗದಗಿಗೆ ಹೊಂಟೇನಿ. ನೀ ಬೆಂಗಳೂರಾಗದೀಯಲ್ಲಾ? ಇಲ್ಲೇನ ಬಂದಿದ್ದಿ?" ಎಂದು ಉತ್ತರದೊಂದಿಗೇ ಪ್ರಶ್ನೆ ಹಾಕಿದಳು ಪ್ರೀತಿ.

"ಹೌದು, ಅಲ್ಲೇ ಆದೀನಿ. ಇಲ್ಲಿ ಕಾಲೇಜಿನ ಕನ್ನಡ ಸಂಘದವರು ಭಾಷಣಕ್ಕ ಕರಸಿದ್ರು. ಬಂದಿದ್ದೆ." ಎಂದು ಸ್ವಲ್ಪ ಅಭಿಮಾನದ ಧ್ವನಿಯಲ್ಲೇ ಹೇಳಿದಳು. ಗಂಟೆ ಬಾರಿಸಿತು. ಹೊರಗೆ ನಿಂತ ಹುಡುಗರೆಲ್ಲ ಕೈ ಜೋಡಿಸಿ, "ಬರ್ತೀವ್ರಿ ಮೇಡಂ, ಭಾಳ ಥ್ಯಾಂಕ್ಸ್. ಮುಟ್ಟಿದ ಮ್ಯಾಲ ಬರೀರಿ," ಎಂದರು.

"ನಿಮ್ಮ 'ಪ್ರಯಾಣ' ಪುಸ್ತಕ ಕಳಿಸಿಕೊಡ್ರಿ ಮೇಡಂ, ನಮ್ಮ ಕಾಲೇಜ ಲೈಬ್ರರಿಗೆ ಬೇಕು" ಎಂದು ಇನ್ನೊಬ್ಬ ತಂಪು ಕನ್ನಡಕಧಾರಿ ಹೇಳಿದ. ಕೈ ಜೋಡಿಸಿ ಎಲ್ಲರಕ್ಕೂ ನಗುತ್ತ ಒಪ್ಪಿಗೆ ಸೂಚಿಸಿದಳು ರಶ್ಮಿ. ಗಾಡಿ ನಿಧಾನವಾಗಿ ಚಲಿಸತೊಡಗಿತು. "ಹೋಂಯ್" ಎಂದು ಅಳುತ್ತಲಿದ್ದ ಮಗನನ್ನು ಸಮಾಧಾನ ಮಾಡುತ್ತಿದ್ದಳು ಪ್ರೀತಿ ಅಸಮಾಧಾನದಿಂದ. ರಶ್ಮಿಗೆ ಮಾತು ಬೇಡವಾಗಿತ್ತು. ಮಾತಾಡಿದರೆ ತನಗೀಗ ಉಂಟಾಗಿರುವ ಸಮಾಧಾನವೇ ಮಾಯವಾಗುವುದೆಂದಾಕೆಯ ಭಾವನೆ. ಸುಮ್ಮನೆ ಕುಳಿತರೆ ಪ್ರೀತಿ ಮಾತಿಗೆಳೆಯದೇ ಬಿಡುವದಿಲ್ಲ ಎಂದು ನೆಪಕ್ಕೆ ಕೈಲೊಂದು ಪುಸ್ತಕ ಹಿಡಿದು ಮುಖ ಮರೆಮಾಡಿ ಪುಟ ತಿರುವತೊಡಗಿದಳು. ಆದರೆ......

...ತಾನು ಬಿ. ಎ. ಕೊನೇ ವರ್ಷ ಓದೂ ಮುಂದ ಪ್ರೀತಿಯ ಫ್ಯಾಮಿಲಿ ವರ್ಗವಾಗಿ ಮನೆಗೆ ಬಂತು. ಒಂದೇ ವರ್ಷ ತಾವು ಕೂಡಿ ಓದಿದ್ದು; ಪ್ರೀತಿ ಆಗ ಬಾಳ ಒರಟಿದ್ಲು. 'ನಾ ಲಗ್ನಾನೇ ಆಗೂದಿಲ್ಲಾ; ಮಕ್ಕಳು ಸಂಸಾರ ಅತ್ತೆ, ನಾದನಿಯರ ಕಿಟಿಕಿಟಿ ಯಾರಿಗೆ ಬೇಕವ್ವಾ ತಾಯಿ? ಕೈತುಂಬ ಗಳಿಸಿ ಆರಾಮಿರ್ತೀನಿ' ಎನ್ನುತ್ತಿದ್ದ ಪ್ರೀತಿ ಈಗ ಪಕ್ಕದಲ್ಲಿರೂ ಗಂಡನಿಂದ, ಉಡಿ ತುಂಬಿರುವ ಕೂಸಿನಿಂದ ಎಷ್ಟು ಸುಖಾ ಸೂಸಿಕೊಂತ ಕುಂತಾಳ ನೋಡು. ಹಿಂಗ ಜೋಡಿ ಇದ್ರ ಪ್ರಯಾಣ ಎಷ್ಟು ಚಂದ ಅಲ್ಲಾ? ಬದುಕಿನ ಪ್ರಯಾಣ ಸೈತ ಹಂಗೇ ಅಲ್ಲ, ಸಹಪ್ರಯಾಣಿಕರಾಗಿ ನಮ್ಮವರೇ ಇದ್ದರೆ ಚೊಲೋ. ಈ ಪುಸ್ತಕದ ಬದ್ಲಿ ನನ್ನ ಕೈಯಾಗೂ ಒಂದು ಕೂಸು ಕೂಸಿರ್ತಿತ್ತಂದ್ರ?' ರೋಮಾಂಚಿತಳಾದಳು. ಗಂಡ ಭುಜದ ಹತ್ತಿರದಿಂದ ಮಗುವನ್ನಾಡಿಸುವ ಕಲ್ಪನೆಯಿಂದ ಗರಿಗೆದರಿದಳು. 'ಮನಸ್ಸು ಮಾಡಿದ್ರ ತನಗೂ ಅಂಥಾ ಭಾಗ್ಯ ಬಾಗಿಲತನಾ ಬಂದಿತ್ತು. ಆದ್ರ ಪ್ರೀತಿಸಿ ನಂಬಿಸಿದ ನೀಲಕಂಠ ಪರದೇಶದ ಆಶಾಕ್ಕ ತನ್ನ ಪ್ರೀತಿಗೆ ಬೆನ್ನ ತೋರಿಸಿ ಮತ್ತೊಂದು ಮದಿವ್ಯಾದ ಮ್ಯಾಲೆ, ಪ್ರೇಮದ ವಿಷಯದಾಗ ಮನಸ್ಸು ಮರಟಿತ್ತು. ಬ್ಯಾರೆ ಮದುವ್ಯಾದ್ರೂ ಆ ಗಂಡನ್ನ ಪ್ರೀತಿಸೂದು ಸಾಧ್ಯನ ಇರಲಿಲ್ಲಾ. ಅವಗೂ ವಂಚನಾ ಮಾಡ್ಕೋತ ತಾನೂ ಆತ್ಮವಂಚನಾ ಮಾಡಕೋತ ಬದುಕೂ ಹಿಂಸಾ ಬ್ಯಾಡಾ ಅನಸ್ತು!' ನಿಟ್ಟುಸಿರಿಟ್ಟಳು ರಶ್ಮಿ. ಹಾಗೆಂದು ಅವಳಲ್ಲಿ ಶೃಂಗಾರ ಭಾವನೆಗಳು ಬಾಡಿರಲಿಲ್ಲ. ಅದರ ಕೇಂದ್ರ ಮಾತ್ರ ಇಂದಿಗೂ ಅವನೇ ಆಗಿದ್ದ. ಅವನ ಸುತ್ತಲೇ ತನ್ನ ಕಲ್ಪನೆಯ ದಾಂಪತ್ಯದ ಕನಸುಗಳನ್ನು ಹೆಣೆಯುತ್ತಿದ್ದಳು. ಕಾಡುವ ಒಂಟಿತನಕ್ಕೆ ರೋಸಿದ್ದಳು. ಅವಳು ಎಲ್ಲಿ ಹೋದರೂ ಒಂಟಿಯಾಗಿ ಹೋಗಬೇಕು. ಆಗೆಲ್ಲ ಎಂಥ ಅನಾಥತೆ...

ಗಳು, ಮುಜುಗರದ ಪ್ರಸಂಗಗಳು, ಒಂಟಿ ಹೆಣ್ಣೆಂದು ಸಮಾಜ ನೋಡುವ ಕೊಂಕು ನೋಟ ಎಲ್ಲವರಿಂದ ಬೇಸತ್ತಿದ್ದಳು. ಆಗೆಲ್ಲ ಗಂಡ ಅನ್ನುವ ವ್ಯಕ್ತಿ ಹತ್ತಿರವಿದ್ದರೆ...? ಅನಿಸಿತ್ತು. ಈಗ ಪ್ರೀತಿಯನ್ನು ನೋಡಿ ಕರುಬುವಂತಾಯಿತು. ಮಗುವಿನಲ್ಲೇ ಮಗ್ನಳಾದ ಅವಳ ಆ ತಾಯ್ತನದ ಸುಖಕ್ಕೆ ಕುಳಿತಲ್ಲೇ ಚಡಪಡಿಸಿದಳು. ಗಂಡ ಓದುವದನ್ನು ಬಿಟ್ಟು ಸುಮ್ಮನೆ ಮಗುವನ್ನೊಮ್ಮೆ, ಹೆಂಡತಿಯನ್ನೊಮ್ಮೆ ನೋಡುತ್ತಿದ್ದ. ರಶ್ಮಿ ತಿರುಗಿ ಪುಸ್ತಕದಲ್ಲಿ ಮುಖ ಸೇರಿಸಿದಳು.

'ನೀ ಪುಣ್ಯವಂತಿ, ಪ್ರೀತಿ, ಇಂಥಾ ಭಾಗ್ಯಾನ ಎಷ್ಟು ಹೆಣ್ಮಕ್ಕಳು ಪಡೀತಾರ ಹೇಳು? ನಿನ್ನ ಹೆಣ್ತನಾ ಗಂಡನಿಂದ, ತಾಯ್ತನಾ ಮಗುವಿನಿಂದ ಅರಳಿ ನಿಂತ್ರವಲ್ಲಾ. ಬಹುಶಃ ಇದೊಂದೇ ನಾರೀ ಜೀವನದ ಸಾರ್ಥಕ್ಯನೋ ಏನೋ. ಈ ಒಂಟಿ ಒಣಕ ಬದಕಿನ್ಯಾಗ ಏನದ ಅಂತ ನೀ ಇದನ್ನ ಬಯಸ್ತಿದ್ದಿ ಪ್ರೀತಿ? ಸತ್ತ ಬಾಳಿನ ಸುತ್ತ ಏನಿತ್ತು? ನನ್ನದು ಅನಿಸುವಂಥಾ ಮನಿ. ಪ್ರೀತಿಸಿ ಆದರಿಸೂ ಗಂಡಾ, ಬದುಕು ತುಂಬೂ ಮಗೂ ಇದ್ದರೇ ಹೆಣ್ಣಿನ ಬಾಳು ಪರಿಪೂರ್ಣ. ನಾ ನೋಡು ಒಂಟಿ ಗೂಗಿಯಂಗ... ನನ್ನನ್ನ ನಾನೇ ಸುತ್ತುತ್ತ ಆ ವೃತ್ತದೊಳಗs ಸಿಕ್ಕು ಏಕತಾನತೆಯು ಚೀಗುಡುವ ನಾದಕ್ಕೆ ಬ್ಯಾಸತ್ತೀನಿ......'

ಮಗು ಮಲಗಿದೊಡನೆ ತಲೆ ಎತ್ತಿದ ಪ್ರೀತಿಗೆ ಪುಸ್ತಕ ಓದುವದರಲ್ಲಿ ಮಗ್ನಳಾದ ರಶ್ಮಿಯನ್ನು ಕಂಡು ಕರುಬುವಂತಾಯಿತು. 'ನೀನೇ ಪುಣ್ಯವಂತಿ ಮಾರಾಯ್ತಿ, ಯಾವ ಜಂಜಾಟನೂ ಇಲ್ಲ. ನೋಡು. ಕೈತುಂಬ ಗಳಿಸ್ತಿ, ಬೇಕಾಧಂಗ ಖರ್ಚು ಮಾಡಿ ಮಜಾ ಮಾಡ್ತಿ. ನಿನ್ನ ನೋಡಿದ್ರ ನನಗ ಹೊಟ್ಟೇಕಿಚ್ಚಾಗ್ತದ. ಅದಲ್ಲದ ಒಳ್ಳೆ ಬರಹಗಾರ್ತಿ, ಭಾಷಣಗಾರ್ತಿ ಅಂತ ಭಾರಿ ಪ್ರಸಿದ್ಧಿ. ಎಷ್ಟು ಜನಾ ನಿನ್ನ ಆರಾಧಕರು! ನಿಂದೊಂದು ಕಾದಂಬ್ರಿ ಸಿನಿಮಾನೂ ಆಗೂದದ ಅಂತ... ಇನ್ನೇನು ದುಡ್ಡಿಂದು ಹೆಸರಿಂದು ಸುರಿಮಳಿನೇ ತೊಗೋ. ಅಲ್ಲಾ, ಕಲಿಯೂಮುಂದ ನೀ ಸದಾ ಮನಿ–ಗಂಡಾ–ಮಕ್ಕಳು ಇದ್ನೆ ಮಾತಾಡ್ತಿದ್ದಿ. ಆ ಹಂಬಲಾ ನಿನಗ ಬಾಳ ಇತ್ತು. ನೆನಪದನಾ? ಆದ್ರ ರಶ್ಮಿ... ಏನ ಸುಖಾ ಆದ ಈ ಸಂಸಾರದಾಗ? ಈ ಮಹಾಶಯರದಾರಲ್ಲಾ, ಗಂಡ ಅನಿಸಿಕೊಂಡವರು, ಇವ್ರು ಸದಾ ಹಿಂಗೇ ತೊಲಿತುಂಡಾ. ಇನ್ನಾ ಅಪ್ಪನ ನೆರಗ ಬಿಟ್ಟಿಲ್ಲಾ. ತಂದ ಪಗಾರೆಲ್ಲ ಅಪ್ಪಾರ್ಪಣಾನೇ! ಅದರಾಗ ಮಗಳ ಮದುವಿಗಿ ತಗದಿಟ್ಟು, ಮಗನ ಅಭ್ಯಾಸಕ್ಕ ಕಳಿಸಿ, ಉಳಿದ ಹೆಣಮಕ್ಕಳ ಬಸರಾ ಬಾಣಂತನಾ ತೊಟ್ಟಿಲಾ ಬಟ್ಟಲಾ ಎಲ್ಲಾ ಜಡಲಾರದಂಗ ಆಗಬೇಕು. ಒಂದೊಂದಿನಾ ಅನ್ನದ ಮ್ಯಾಲೇ ಇರಬೇಕು. ಒಂದ ಛಂದ ಸೀರಿ ಕಂಡೀನ್ಯಾ, ಬಂಗಾರದ ಮಾತಂತೂ ದೂರೇ ಉಳೀತು. ನೀ ಮೈತುಂಬ ಅಲ್ಲದಿದ್ರೂ ಎಷ್ಟ ಬೇಕ ಅಷ್ಟರ ಹಾಕ್ಕೊಂಡು ರೇಶ್ಮಿ ಸೀರಿ ಉಟಗೊಂಡು ಸುಖಿ




"ವಿತರಣೆ ಮಾಡಬೇಕಾಗಿದ್ದ ಸಸಿಗಳನ್ನು ಒಳಗಿಟ್ಟು ನಾವು ಒಂದು ವಾರ ರಜಾ ಹಾಕಿ ಪ್ರಮಾದವಾಯ್ತು."

ದಿಂದದಿ ಬಿಡವಾ, ಎರಡೂ ಹೊತ್ತು ಬಿಸಿ ಬಿಸಿ ಊಟಾ ಮಾಡ್ಕೊಂಡು. ಅತ್ತಿ ಗೊಣಗಾಟಿಲ್ಲಾ, ನಾದಿನಿದೇರ ದಬ್ಬಾಳಿಕಿಲ್ಲಾ. ಅವರ್ದು ಅವರ ಮಕ್ಕಳ್ದು ಕಿರಿಚಾಟಾ ಖರ್ಚಿಲ್ಲಾ. ಆರಾಮಿರದಿದ್ರೂ, ಕೆಲಸಾ ಮಾಡಿ ದಣದಿದ್ರೂ ಗಂಡನ ಹಂಬಲಕ್ಕೆ ನುಗ್ಗಾಗಗೂ ಹಿಂಸಾ ಇಲ್ಲಾ. ನಿಮ್ಮ ತವ್ರುವ್ರು ಅದು ಕೊಡ್ಲಿಲ್ಲ, ಇದು ಕೊಡ್ಲಿಲ್ಲ ಅನ್ನೊ ಮೂದಲಕಿ ಇಲ್ಲಾ. ಬ್ಯಾಸರಾದ್ರ ರೇಡಿಯೋ ಹಚಿಗೊಂಡು, ಕ್ಯಾಸೆಟ್ ಹಾಕ್ಕೊಂಡು ಪುಸ್ತಕಾ ಓದಿಕೊಂತ ಮಜಾದಿಂದ ಮಲಕೋಬಹ್ದು. ಅಂಥಾ ಸುಖಾ ನಿನಗದ. ಚೊಲೋ ಪುಸ್ತಕಾ ಓದಲಾರ್ದಽ ಎಷ್ಟ ದಿನಾ ಆತು? ಒಂದು ಸಿನಿಮಾನೂ ನೋಡೂದಾಗೂದಿಲ್ಲಾ. ಬರೇ ಗಾಣ ದೆತ್ತಿನಂಗ ದುಡದದ್ದೊಂದಽ ಬಂತು. ಈ ಮಾರಾಯ್ರು ಸಾಂಬ ಹರಾ! ಆಫೀಸಾಯ್ತು ಅವ್ವಾಯ್ತು ಒಂದ ಛಂದನ ಮಾತಿಲ್ಲ, ಕತಿ ಇಲ್ಲ. ಕೂಸ ಅತ್ರ ಎತಬೇಕನ್ನೊದೂ ತಿಳಿಂಗಿಲ್ಲಾ. ಏನ ಮಾಡೂದು ಹೇಳು. ನಮ್ಮ ನಮ್ಮ ಕರ್ಮಕ್ಕ ಯಾರನ್ನ ದೂರೂದು? ಅರೆ, ಬಾಗಲಕೋಟ ಬಂತೇನ ಅಗ್ಲೇ, ಎಂದುಕೊಳುತ್ತ ಪ್ರೀತಿ, "ಸ್ವಲ್ಪ ನೀರ ತರ್ತೀರೇನು?" ಎಂದು ಗಂಡನಿಗೆ ವಾಟರ್ ಬ್ಯಾಗ್ ನೀಡಿದಳು. ಆತ ಹಾಗೋಡಿ ಹೀಗೆ ಬಂದ ನೀರು ತಂದ.

ಚಮುಚದಿಂದ ಮಗುವಿಗೆ ನೀರು ಕುಡಿಸುತ್ತಿದ್ದ ಹೆಂಡತಿಯನ್ನೇ ನೋಡುತ್ತ ನಿಂತ ಅವನನ್ನು ಕಂಡು ರಶ್ಮಿಗೆ ನೀರಡಿಕೆಯಾಯಿತು. ಬಾಯಿ ಬಿಟ್ಟು ಕೇಳಲು ಸಂಕೋಚಕ್ಕಿಂತ ಹೆಚ್ಚಾಗಿ ಅದರ ಹಿಂದೇ ಮಾತಿನ ಸರಪಳಿ ಬೆಳೆಯುತ್ತದಲ್ಲ– ಮಾತೇ ಬೇಡ ಅನಿಸಿತು. ಅವೇ ಬಾಯಿಪಾಠ ಮಾಡಿದಂಥ ಮಾತುಗಳು. ಬಾಯಿ ಬಿಟ್ರೆ ಈಗ ಆಕಿ ತನ್ನ ಮಗನ ಬಾಲಲೀಲಾ, ಗಂಡನ ಅಗಾಧ ಪ್ರೇಮಾ, ಅತ್ತೀ ತಾಯಿಕರಳು ವರ್ಣಿಸಿ ಕೊರ್ಯಾಕ ಸುರೂ ಮಾಡ್ತಾಳ. ಈ ಮಾತಿನ ಹಿಂಸಾನೇ ಬ್ಯಾಡ ಎನ್ನುತ್ತ ರಶ್ಮಿ ಕಣ್ಣು ಮುಚ್ಚಿ ಒರಗಿ ಕೊಳ್ಳುತ್ತಾಳೆ ಕುಳಿತಲ್ಲೇ. ಈ ಹೊಯ್ದಾಟ ತಳಮಳಕ್ಕೆಲ್ಲಾ ಯಾರು ಕಾರಣ? ಅಂತ ಮನಸ್ಸು ಹುಡುಕಾಟಕ್ಕೆ ಇಳಿಯುತ್ತದೆ...ಅಪ್ಪ ಸತ್ತಿಂದ ಕಾಕಾನೇ ತನ್ನನ್ನು ಸಾಕಿದಾ. ಅವ್ವನ ಮುಖಾ ನೋಡಿದ ನೆನಪೂ ಇಲ್ಲಾ. ಬಾವಿ ಬಿದ್ದ ಸತ್ಲಂತ. ಯಾಕೋ ಇಂದಿಗೂ ತಿಳಿದಿಲ್ಲಾ. ಮದುವಿ ಆಗದ ಕಾಕಾ ತನ್ನನ್ನ ಭಾಳ ಜೀವಾ ಮಾಡ್ತಿದ್ದಾ. ಸಣ್ಣಾಕಿದ್ದಾಗ ನಸಕಿನ್ಯಾಗ ಎಬ್ಬಿಸಿ ಊರಾಗ ಬಯಲಾಟ ನಡೆಲ್ಲಿ ಹೆಗಲಮ್ಯಾಲ ಕೂಡಿಸಿಕೊಂಡು ಹೋಗ್ತಿದ್ದಾ. ಆ ಬಣ್ಣದ ಪಾತ್ರಗಳು ಕುಣದು ಮಾತಾಡೂವಾಗ ತಾನೂ ಅದರ್ಜೊತೀನೇ ಹೊಸ ಲೋಕದಾಗಿರ್ತಿದ್ದೆ. ಮಕ್ಕಳ ಕಲೆ ಪುಸ್ತಕಾ ತಂದ ಕೊಡ್ತಿದ್ದಾ. ಬಾಲಮಿತ್ರ, ಚಂದಮಾಮಾ ಕತೆಗೋಳು ಕನಸಿನ್ಯಾಗೂ ಕಾಡತಿದ್ದ್ವು. ಆಗಿನಿಂದ್ಲೆ ತನಗೂ ಕಥಿ ಪಾತ್ರವಹಿಸಿ ಕನಸ ಕಟ್ಟೊ ಹವ್ಯಾಸ ಬೆಳೀತು. ದೊಡ್ಡಾಕ್ಯಾಗಿ ಬ್ಯಾರೇ ಊರಾಗ ಹಾಸ್ಟೇಲಿನ್ಯಾಗಿದ್ದು ಕಾಲೇಜ ಓದೂ ಮುಂದ ಕಾಕಾ ಒಂದಿನಾ ಜಾರಿ ಬಿದ್ದು ರೈಲಿಗೆ ಸಿಕ್ಕು ಸತ್ತ. ಅವತ್ತಿನಿಂದ ತಾನು ಜಡಾ ಆದ್ನು. ತಾ ಪ್ರೀತಿಸಿದವಾ ಕೈ ತೋರಿಸಿ ಹೋದ ಮ್ಯಾಲಂತೂ ಬದುಕು ಅಸಹನೀಯ ಅನಸ್ತು. ಮತ್ತಷ್ಟು ಮನಸ್ಸು ಕಲ್ಲಾಯ್ತು. ಕನಸುಗಳೆಲ್ಲಾ ಚದರಿದ್ರೂ ಆಳದಾಗೆಲ್ಲೋ ತನ್ನನ್ನ ಅಲ್ಲಾಡಿಸುತ್ತ ಬರವಣಿಗೆಗೆ ಹಚ್ಚಿದವು. ಹಾಸ್ಟೇಲ್ ಸೇರಿ ಎಂ. ಎ. ಮಾಡಿದೆ. ಪ್ರಥಮ ದರ್ಜೆ ಸಿಕ್ಕು ಪಿ. ಎಚ್. ಡಿ. ಮಾಡಿದೆ.

ಕೆಲ ದಿನ ಅಲ್ಲಲ್ಲಿ ಕೆಲಸಾ ಮಾಡಿದ ನಂತರ ಬೆಂಗಳೂರ ಯುನಿವರ್ಸಿಟಿಯೊಳಗ ಕೆಲಸ ಸಿಕ್ತು. ತಂದಿ ಆಸ್ತಿ ಮಾರಿ ಬೆಂಗಳೂರಾಗ, ಮನಿ ತೊಗೊಂಡ್ಯಾ. ಒಡವಿ ವಸ್ತ್ರ ಕಾರು ಎಲ್ಲಾ ಆಯ್ತು ಆದ್ರ...ಬದುಕು ಖಾಲಿ ಆಗೇ ಉಳಿತು. ಏನಿದ್ರೇನು? ದುಡದು ಮನಿಗ್ಬಂದ್ರ ಸಂತೈಸೂ ಜೀವಿಲ್ಲಾ. ಯಾರ ಸಲುವಾಗಿ ದುಡೀಬೇಕು? ಸಿನಿಮಾಕ್ಕ ಕೊಟ್ಟ ಕಾದಂಬರಿಯಿಂದ ಹಣಾ ಏನೋ ಬಂತು. ಏನ್ ಮಾಡ್ಲಿ? ಹೆಸರೇನೋ ಬಂತು. ಏನ್ ಮಾಡ್ಲಿ? ಅದಕ್ಕಾಗಿ ಅಭಿಮಾನ ಪಡವ್ರಾದರೂ ಯಾರದಾರ? ನನ್ನ ಭಾಷಣ ಬರಹಾ ಮೆಚ್ಚಿಕೊಂಡು ದಿನಾ ನೂರಾರು ಪತ್ರ ಬರ್ತಾವ, ಆದ್ರೆ, ಹ್ಯಾಂಗದೀ? ಉಂಡೇನು? ತಿಂದೇನು? ಆರಾಮಿದ್ದೀನು?" ಅಂತ ಕೇಳೂದಿಕ್ಕಿಲ್ಲಾ. ಛೀ ಇದೊಂದು ಬದುಕ್ಯಽ?

ಪ್ರೀತಿ, ನೀ ಏನೇ ಅನಕೋ. ಉಪಾಸಿದ್ರೂ ಸರಿ. ಮನಶ್ಯಾಗ ಒಂಟಿತನದಂಥಾ ಘೋರ ಶಿಕ್ಷಾ ಯಾವುದೂ ಇಲ್ಲಾ. ಪ್ರೀತಿ, ಜೀವಕ್ಕೊಂದು ಜೋಡಿ ಬೇಕss ಬೇಕು. ನಿನಗೇನಾದರೂ ಕಾಪಾಡೂ ಗಂಡದಾನಾ. ನನಗ್ಯಾರದಾರ ಹೇಳು. ನನ್ನಂಥವ್ರು ಬಗ್ಗೆ ಅಪಾರ್ಥ ಮಾಡ್ಕೊಂಡು ಹಲ್ಲ ಕಿಸಕೋತ ಜೊಲ್ಲ ಸುರಸೂ ದೃಷ್ಟಿಗಳನ್ನೇ ಕಂಡು ಹೇಸಿಗೊಳ್ಳೊ ಪ್ರಮೇಯ ನಿನಗಿಲ್ಲ. ಈ ಎಲ್ಲಾ ಯಾತನಾಕ್ಕ ನನಗಿರೂದೊಂದೇ ದಾರಿ–ಬರಿಯೂದರ ಮೂಲಕ ಹಗುರಾಗೂದು. ಅದು ನನಗ ಅನಿವಾರ್ಯ, ಅದss ನನಗ ಬದುಕು...'

ಸುಮ್ಮನೆ ಕಣ್ಮುಚ್ಚಿ ಮಲಗಿದ ರಶ್ಮಿಯನ್ನು ಕಂಡ ಪ್ರೀತಿ, ಮಹಾ 'ಗ' ಬಂದನ ಇಕೆಗೆ ಏನೋ ದೊಡ್ಡ ಹೆಸರ ಬಂದನಂತ ಮಾತ ಸೈತ ಆಡೂದಿಲ್ಲಾ. ಅಷ್ಟಕ್ಕೂ ಈಗ ಮಾತಾಡರೂ ಯಾರಿಗಿ ಬೇಕಾಗೇದ? ಈಗ ಬಾಯಿ ಬಿಟ್ಟರ ತನ್ನ ಬಂಗಲೆ ಕಾರು, ವಡವಿ, ವಸ್ತ್ರಾ ತನ್ನ ಕಾದಂಬರಿ ಅದರ ಚಿತ್ರುದ ಒಪ್ಪಂದ ಇದನ್ನೇ ಕೊರ್ಯಾಕಿ. ನೀ ಏನ ಮಾಡಿಕೊಂಡಿ ಅಂತ ಕೇಳಿದ್ರು ಏನ ಹೇಳ್ಲಿ? ಲಗ್ನದಾಗ ಹಾಕಿದ ಎರಡೆಳಿ ಅವಲಕ್ಕಿ ಸರಾನೂ ಇವರ ಮೂವರನೇ ತಂಗಿ ಮದಿವ್ಯಾಗ ಬ್ಯಾಂಕಿನಾಗಿಟ್ಟದ್ದು ಇನ್ನೂ ಬಿಡಿಸಿ ತರಾಕ ಆಗಿಲ್ಲಾ. ಬಿಚ್ಚೊಲೆ ಗೌರಮ್ಮನಂಗ ಕಾಣೂ ನನ್ನ ನೋಡಿ ಇಕಿಗಿ ಅಯ್ಯೋ ಪಾಪ ಅನಸ್ತಿರಬೇಕು. ಅದಕ್ಕss ಮಾತಾಡಲೊಲ್ಲಳೇನೋ. ಬಿಟ್ಟರ ಬಿಟ್ಲಿ ನನಗೇನು? ಖರೇ ಅಂದ್ರು ಆಕಿಗಿ ಮುಂದ ಓದೂ ಆಶಾನೇ ಇರ್ಲಿಲ್ಲಾ. ಬಿ. ಎ. ಆದ ಮ್ಯಾಲೆ ಮೇ ಸೂಟ್ಯಾಗ ಲಗ್ನದ ವಿಚಾರ ನಡದಿತ್ತು. ಆಗss ನಮಗೂ ವರ್ಗಾಗಿ ಈ ಕಡೆ ಬಂದೀವಿ. ನನಗಂತೂ ಎಂ. ಎ. ಮಾಡ್ಬೇಕು; ಪಿ. ಎಚ್. ಡಿ. ಮಾಡ್ಬೇಕು ಅಂತ ಎಷ್ಟು ಮನಸಿತ್ತು? ಅದರ ಸಲುವಾಗೇ ತಯಾರಿ ಮಾಡಿದ್ದೆ. ಅವೆಲ್ಲಾ ಈಗ ಅಟ್ಟದಾಗ ಗೆದ್ದಿಹತ್ತಿ ಬಿದ್ದಾವೋ. ಏನ ಚುಮ್ಮರಿ ತಿನ್ನೊ ಹಾಳ್ಯಾಗ್ಯಾವೋ. ಬಿ. ಎ. ಮುಗಿಯೂದಕ ಅಪ್ಪ ಯಾಕ ಮದುವಿಗೆ ಅವಸರಾ ಮಾಡಿದ್ನೋ. ಸಾಲಾಗಿ ಏಳ ಮಂದಿನ್ನ ದಾಟಸೂ ತರಾತುರಿ ಇರಬೇಕು, ಬಾಳ ಓದ್ಬೇಕು ಅನ್ನೂ ಆಶಾಕ, ಕಲ

ಬಿತ್ತು. ಈಗ ಎಲ್ಲಾ ನುಂಕೊಂಡು ದುಡ್ಯೋದೇ ದುಡ್ಯೋದು. ನಸಕಿನ್ಯಾಗ ನಾಲ್ಕಕ್ಕ ಬರೂ ನಳದ ನೀರು ತುಂಬಿ ರಾತ್ರಿ ಹನ್ನೊಂದರತನಾ ಬೆನ್ನ ಮೂಳಿ ಮುರೆಪ್ಪು ದುಡತಾ. ಆದರೂ ಮನಸ್ಸಿಗೆ ಸಮಾಧಾನss ಐತೇನು? ತವರಮನ್ಯಾಗರ ಸ್ವಲ್ಪ ದಿನಾ ಆರಾಮಿದ್ದೀನಂದ್ರ ತಂಗಿ, ಬಾಣಂತನಕ್ಕಂತ ಅತ್ತೀ ಹಿಂದೇ ಮಗನ್ನ ಅಟ್ಯಾಳ. ತಮ್ಮಂದರು ಎಂತೆಂತಾ ಹೊಸಾ ಪುಸ್ತಕಾ ತಂದ ಕೊಟ್ಟಿದ್ರು. ಹೊಸಾ ಹೊಸಾ ಸಿನಿಮಾ ಬಂದಿದ್ದುವು. ಎಲ್ಲಾ ಬಿಟ್ಟ ಬರಬೇಕಾತು. ನನ್ನ ಖೋಡಿ ದೈವಕ್ಕ ಯಾರೇನ ಮಾಡಬೇಕು? ರಶ್ಮಿ, ನೀ ಈ ಸಂಸಾರದ ಜಂಜಾಟಕ್ಕೆ ಬೀಳ್ದೇ ಶ್ಯಾಣ್ಯಾಕ್ಯಾದಿ ನೋಡು. ಇದರಾಗೇನ ಮಣ್ಣಾದss ತಾಯಿ. ಎಲ್ಲಾ ಕೇಳಿಕೊಂಡ ಬಂದಿರಬೇಕು ಮೊದ್ಲ. ಒಂದು ಹೊಟ್ಟಿ ತುಂಬೀತ, ಬಂದ ಮನಸ ತುಂಬೀತ, ಮ್ಯಾಮನಿಗೆ




"ಇನ್ನು ತಮಗೆ ಪಕ್ಷಾಂತರ ಮಾಡಲು ಎರಡೇ ಪಕ್ಷಗಳು ಬಾಕಿ ಇರೋದು ಸಾರ್. ಶುಕ್ಲ ಪಕ್ಷ ಮತ್ತು ಕೃಷ್ಣ ಪಕ್ಷ"

ಮಂದಾ ಇರದಿದ್ರೂ ಬ್ಯಾಡಾಗಿದ್ರೂ ಹಿಂಸಾಕ ಒಡ್ಡ್ಯಾ ಈ ವೈ ಸುಖಾ ಇಲ್ಲದ ದಾಂಪತ್ಯಕ್ಕ ಏನಾದ್ರೂ ಅರ್ಥ ಅದ ಏನು? ಹೊಸ ಹೊಸ ಪುಸ್ತಕ ಓದ್ತಾ ಆರಾಮಾಗಿ ಮಲಕೊಂಡು ಒಬ್ಬೆ ಏಕಾಂತ ಸುಖಾ ಅನುಭವಿಸೂ ಮಜಾ ಎಷ್ಟ ಮಂದಿಗಿದ್ದೀತು. ಹೇಳು ? ಒಬ್ರೇ ಇದ್ರ ಬೇಕಾ ಧಂಗ ಇರಬಹುದು. ನೀ ಭಾಗ್ಯವಂತಿ ನೋಡು. ಇದೆಲ್ಲಾ ಸಿಕ್ಕsದ. ನಾ ನೋಡು,' ಎಂದುಕೊಂಡು ನಿಟ್ಟುಸಿರು ಬಿಟ್ಟಳು ಪ್ರೀತಿ.

ಗದಗ ಸ್ಟೇಶನ್ ಬಂದಾಗ ಇಬ್ಬರೂ ಎಚ್ಚೆತ್ತರು. ಪ್ರೀತಿಯ ಯಜಮಾನರು ಮೇಲಿಟ್ಟ ಸಾಮಾನುಗಳನ್ನು ಇಳಿಸಿದರು. ಪ್ರೀತಿ ಮಗುವಿನ ಸಾಮಾನುಗಳನ್ನು ಜೋಡಿಸಿ ಬಾಸ್ಕೆಟ್ಟಿನಲ್ಲಿಟ್ಟುಕೊಂಡಳು. ಅದರ ಹೊದಿಕೆ ಜಾಡಿಸಿ ಎದ್ದು ನಿಂತಳು. ರಶ್ಮಿಯೆಡೆಗೆ ನೋಡಿ, "ಇವತ್ತ ಇದ್ದ ಹೋಗಲಾ ರಶ್ಮಿ, ಇಳಿ. ನಾಳಿ ಹೋಗಾಕತ್ತಿಅಂದಳು." ('ಏನು ಜಂಬಾ ಹೇಳ್ಕೊತಾಳೋ; ಮತ್ತೆಲ್ಲರ ಭಾಷಣಾನೋ ಏನೋ ಅದ ಅಂತ ಹೇಳ್ಕೊತಾಳೊ.')

"ಇಲ್ಲ ಪ್ರೀತಿ, ರಜಾ ಇಲ್ಲಾ, ಮುಂಜಾನಿ ಕಾಲೇಜಿಗೆ ಹೋಗ್ಬೇಕು" ಎಂದಳು ರಶ್ಮಿ. (ಮಹಾ ತನ್ನ ಸಂಸಾರ ನೋಡ ಬಾ, ನಿನಗೆಲ್ಲದ ಇಂಥಾ ದೈವ ಅಂತ ತೋರಿಸಾಕ ಕರ್‍ಯಾಕತ್ತಾಳ ನನಗೇನ ತಿಳಿದಿಲ್ಲೇನ?) ಒಳಗೊಳಗೆ ಅಪಮಾನವಾದರೂ ಮುಂದುವರಿಸಿದಳು. ತನಗೇನೂ ಕಡಿಮೆಯಿಲ್ಲವೆಂದು ಇವಳಿಗೆ ತಿಳಿಯಲಿ. "ಏನ ಮಾಡ್ಲಿ ಹೇಳು ಬಿಡುವೆ ಇರುದಿಲ್ಲ, ಪ್ರೀತಿ ಈ ಭಾಷಣಾ ಈ ಚಿತ್ರತಂಡದವರ ಕಿಟಿಕಿಟಿಗೆ ಎಲ್ಲರ ಹೋಗಿ ಬರಬೇಕಾಗ್ತದ. ನಿನಗ ಗೊತ್ತಿಲ್ಲಾ? ನನ್ನ 'ಪ್ರಯಾಣ' ಕಾದಂಬರಿಗೆ ಅಕಾಡೆಮಿ ಪ್ರಶಸ್ತಿ ಬಂದದ್ದು ಆಗಿನಿಂದಲೂ ಸನ್ಮಾನ ಸಮಾರಂಭಗಳಿಗಾಗಿ ಹೋಗಿ ಹೋಗಿ ಸಾಕಾಗೇದ. ಕಾರು ತಂದಿದ್ರು ಇನ್ನೂ ಲಗೂ ಮುಟ್ತಿದ್ದೆ. ರಿಪೇರಿಗಿ ಹೋಗೇದ. ನೀವs ಒಮ್ಮೆ ಬರ್ರಿ" ಎಂದು ಸ್ವಾಭಿಮಾನ ಪ್ರತಿಷ್ಠೆ ಆತ್ಮವಿಶ್ವಾಸ ತುಂಬಿ ತುಳುಕುವ ಧಾಟಿಯಲ್ಲಿ ಹೇಳಿ ಅವಳಲ್ಲಿ ಅಸೂಯೆ ಕಂಡಿತೇನೋ ಎಂದು ಸೂಕ್ಷ್ಮವಾಗಿ ದಿಟ್ಟಿಸಿದಳು. "ಆಯ್ಯಯ್ಯ ಏನ್ ಹೇಳ್ಲಿ ರಶ್ಮಿ ನನ್ನ ಕಥಿ ಇವ್ರು ಒಂದ ಗಳಿಗೆರ ನನ್ನನ್ನ ಬಿಡೂದಿಲ್ಲಾ. ಸದಾ ನಾಟಕ ಸಿನೆಮಾ ಪಾರ್ಟಿ. ನನಗಂತೂ ಸಾಕಾಗ್ತದ. ನಮ್ಮತ್ತೆಂತೂ ಯಾವ ಕೆಲಸಕ್ಕೂ ಹಚ್ಚೂವದಿಲ್ಲಾ. ತಾಯಿಕಿಂತ ಹೆಚ್ಚಿನ ಕಳ್ಳಿನವ್ರು ಅದಾರಾ. ನಮ್ಮ ಮೈದನಾ ನಾದನ್ಯಾರಿಗಂತೂ ನಾನಿರದಿದ್ರ ಒಂದ ಗಳಗಿ ಸಡೆಂಗಿಲ್ಲಾ. ಈಗಂತೂ ಈ ರಾಜಕುಮಾರನ ಸೇವಾಕ್ಕ ಎಲ್ಲಾ ವ್ಯಾಳ್ಯಾ ಹೋಗ್ತದ. ಏನೇ ಆಗ್ಲಿ. ಸಂಸಾರದ ಮಾತೇ ಬ್ಯಾರೆ ನೋಡು," ಎಂದು ಅವಳಲ್ಲೇನಾದರೂ ಅಸೂಯೆ ಇಣುಕಿತೇನೋ ಎಂದು ಕಣ್ಣಲ್ಲಿ ಕಣ್ಣಿಟ್ಟು ನಕ್ಕಳು. ಗಂಡ ಕರೆದದ್ದಕ್ಕೆ, "ಆಗ್ಲಿ ತೋಗೋ, ಯಾವಾಗರ ಇವ್ರು ಮೀಟಿಂಗ್ ಇದ್ದಾಗ ಇಬ್ರೂ ಬರ್ತೀವಿ. ಬರ್ಲ್ಯಾ ಹಂಗಾರ?" ಎಂದಳು. ಅವನೂ ಕೈ ಜೋಡಿಸಿ ವಿದಾಯ ಹೇಳಿದ.

ಟಾಂಗಾದಲ್ಲಿ ಕೂಡುತ್ತ, 'ಇನ್ನು ಹೋಗಿ ನೀರ ಹೊರಾಕ ನಿಲ್ಲಬೇಕು. ಪುಣ್ಯವಂತಿ ರಶ್ಮಿ. ಹೋದ ಕೂಡ್ಲೆ ಜಳಕಾ ಮಾಡಿ ಬಿಸಿಬಿಸಿ ಉಂಡು ಬೆಚ್ಚಗ ಮಲಗತಾಳೇನೋ' ಎಂದು ನಿಟ್ಟುಸಿರು ಬಿಟ್ಟಳು.

'ಇನ್ನು ಹುಬ್ಬಳ್ಳಿಯಿಂದ ಬೆಂಗಳೂರ ಟ್ರೈನು ಹಿಡೀಬೇಕಲ್ಲ. ಮನಿಗೆ ಹೋದಕೂಡ್ಲೆ ಮತ್ತ ಖಾಲೀತನಾ. ಒಂಟಿತನಾ ಆ ಅಂತ ಬಾಯಿ ತಗೀತದ. ಭಾಗ್ಯವಂತಿ ಪ್ರೀತಿ. ಹೋದ ಕೂಡ್ಲೆ ಅತ್ತಿ ಉಪಚಾರ ಮಾಡ್ತಾಳ. ನಾದನಿಯರು ಚಾ ಮಾಡಿಕೊಟ್ಟು ಆದರಸ್ತಾರ.' ಅಂತ ನಿಟ್ಟುಸಿರು ಬಿಟ್ಟಳು.

ಗಾಡಿ ಇದಾವುದನ್ನೂ ಯೋಚಿಸದೇ ಹೊರಟೇ ಬಿಟ್ಟಿತು. ●



**ಹೊಟ್ಟೆಗಿಷ್ಟಿದ್ದರಾಯಿತು, ಮನುಷ್ಯ ಬದುಕುತ್ತಾನೆನ್ನುವುದು ಸರಿಯಿಲ್ಲ.**

# ಹಿಂದೂ ಮಹಾಸಾಗರದ ಭೂ-ರಾಜಕೀಯ

ಎಸ್. ಬಿ. ನರಗುಂದಕರ

ಹಿಂದೂ ಮಹಾಸಾಗರ, ಅಟ್ಲಾಂಟಿಕ್, ಪ್ಯಾಸಿಫಿಕ್, ಆರ್ಕ್ಟಿಕ್ ಇವು ಪ್ರಪಂಚದ ನಾಲ್ಕು ಮಹಾಸಾಗರಗಳು. ಪೃಥ್ವಿಯ ಕವಚದ ೭೧% ರಷ್ಟು ಭಾಗವನ್ನು ನೀರು ಆವರಿಸಿದೆ; ಆ ಪೈಕಿ ೯೭%ರಷ್ಟು ನೀರು ಈ ಮಹಾಸಾಗರಗಳಲ್ಲಿದೆ. ಅಟ್ಲಾಂಟಿಕ್, ಪ್ಯಾಸಿಫಿಕ್ ಮತ್ತು ಹಿಂದೂ ಮಹಾಸಾಗರಗಳ ದಕ್ಷಿಣದ ಭಾಗಗಳನ್ನೆಲ್ಲ ಕೂಡಿಸಿ ದಕ್ಷಿಣ ಮಹಾಸಾಗರವೆಂದೂ ಆ ಭಾಗಗಳು ಅಂಟಾರ್ಕ್ಟಿಕ್ ಭೂಭಾಗಕ್ಕೆ ಸಂಲಗ್ನವಾಗಿರುವದರಿಂದ ಅಂಟಾರ್ಕ್ಟಿಕ್ ಮಹಾಸಾಗರವೆಂದು ಕರೆಯುವುದೂ ಇದೆ. ಪ್ಯಾಸಿಫಿಕ್ ಮಹಾಸಾಗರದ ವಿಸ್ತಾರ ಸುಮಾರು ೬೦ ಲಕ್ಷ ಚದರ ಮೈಲುಗಳಷ್ಟಾಗಿದ್ದರೆ ಹಿಂದೂ ಮಹಾಸಾಗರವದ್ದು ೨೯ ಲಕ್ಷ ಚದರ ಮೈಲುಗಳು.

'ಹಿಂದೂ ಮಹಾಸಾಗರವನ್ನು ಆಳುವವ ಏಶಿಯಾ ಖಂಡವನ್ನು ಆಳಬಲ್ಲ, ಏಶಿಯಾ ಖಂಡವನ್ನು ಆಳುವವ ಜಗತ್ತನ್ನೇ ಆಳಬಲ್ಲ' ಎಂಬುದು ಭೂ-ರಾಜಕಾರಣ (Geopolitics) ತಜ್ಞರ ಹಳೆಯ ಸೂತ್ರ. ಈ ದಿನಗಳಲ್ಲಿ ಆ ಸೂತ್ರ ಮತ್ತಷ್ಟು ಅರ್ಥವತ್ತಾಗುತ್ತಿದೆ. ಸಾಗರ ಮಾರ್ಗವನ್ನು ಹಿಡಿದು ಜಗತ್ಸಮ್ರಾಟರಾದವರೆಲ್ಲ ಹಿಂದೂ ಮಹಾಸಾಗರವನ್ನೇ ತಮ್ಮ ರಾಜಮಾರ್ಗವನ್ನಾಗಿರಿಸಿಕೊಂಡಿದ್ದರು. ಡಚ್ಚರು, ಪೋರ್ತುಗೀಜರು, ಫ್ರೆಂಚರು ಮತ್ತು ಇಂಗ್ಲೀಷರು ಸ್ಥಾಪಿಸಿದ ಸಾಮ್ರಾಜ್ಯಗಳಿಗೆ ಹಿಂದೂ ಮಹಾಸಾಗರ ಜೀವನಾಡಿಯಾಗಿತ್ತು. ಈ ಮಹಾಸಾಗರದ ಸೈನಿಕ ಮಹತ್ವ ಐತಿಹಾಸಿಕವಾದುದು; ವರ್ತಮಾನದಲ್ಲಿ ಅದು ಇಮ್ಮಡಿಗೊಂಡಿದೆ.

ತನ್ನದೇ ಆದ ವೈಶಿಷ್ಟ್ಯಗಳನ್ನು ಹೊಂದಿದ, ಈ ಮಹಾಸಾಗರ ಉಳಿದ ಮೂರೆಕ್ಕಿಂತ ಚಿಕ್ಕದು. ಆದರೆ, ಈ ಮಹಾಸಾಗರಕ್ಕೆ ಆಯಾತದ ಸ್ವರೂಪವಿದೆ. ಉತ್ತರಕ್ಕೆ ದಕ್ಷಿಣ ಏಶಿಯದ ಭೂಭಾಗ ಮೇಲ್ಛಾವಣಿಯಂತೆ ಹಬ್ಬಿದೆ. ಬರ್ಮಾ, ಮಲೇಶಿಯಾ, ಇಂಡೋನೇಶಿಯಾ ಹಾಗೂ ಇತರ ದ್ವೀಪಸ್ತೋಮಗಳು ಇದರ ಪೂರ್ವಕ್ಕೆ ಗೋಡೆಗಳಂತೆ ಹಬ್ಬಿವೆ; ಪಶ್ಚಿಮಕ್ಕೆ ಆಫ್ರಿಕದ ಪೂರ್ವ ಕರಾವಳಿ. ಭಾರತದ ಜನನಿಬಿಡವಾದ ದಕ್ಷಿಣದ ಭೂಶಿರವು ಈ ಸಾಗರದಲ್ಲಿ ಸಾವಿರ ಮೈಲುಗಳಷ್ಟು ಆಳವಾಗಿ ಚಂಚುಪ್ರವೇಶ ಮಾಡಿದೆ. ಇದಕ್ಕೆ ಸಂಲಗ್ನವಾದ ಕರಾವಳಿಗಳೆಲ್ಲ ಸಮೃದ್ಧ ಹಿನ್ನಾಡುಗಳೊಂದಿಗೆ ಜನನಿಬಿಡವಾಗಿವೆ.

ಈ ಮಹಾಸಾಗರದ ದೊಡ್ಡ ನಡುಗಡ್ಡೆಗಳು, ಮಹತ್ವದ ದ್ವೀಪಸ್ತೋಮಗಳು ಸಮೀಪ ಖಂಡಗಳ ದಂಡೆಗಳಿಗೆ ಹತ್ತಿರದಲ್ಲಿಯೇ ಇವೆ. ಉದಾಹರಣೆಗೆ, ಶ್ರೀಲಂಕಾ ಭಾರತಕ್ಕೆ ಎಷ್ಟೊಂದು ಸಮೀಪವಾಗಿದೆ ಎಂದರೆ, ಅದು ನಡುಗಡ್ಡೆಯ ತನ್ನ ಸ್ವರೂಪವನ್ನೇ ಕಳೆದುಕೊಂಡಿದೆ. ಮದಾಗಾಸ್ಕರ ಅಥವಾ ಮಲಾಗಾಸೆಯು ಆಫ್ರಿಕಕ್ಕೆ

ಸಮೀಪವಾಗಿದೆ; ರಕ್ಷಣಾಂದ್ರಿಷ್ಟಿಯಿಂದಲೂ ಹಾಗೆಯೇ.

ಆಫ್ರಿಕದ ಪೂರ್ವ ತೀರ, ಬಲೂಚಿಸ್ತಾನ, ಪಾಕಿಸ್ತಾನ, ಇರಾಣ ಹಾಗೂ ಅರೇಬಿಯದ ಕರಾವಳಿಗಳು, ಭಾರತದ ದ್ವೀಪಕಲ್ಪ, ಬರ್ಮಾದ ಪಶ್ಚಿಮ ಕರಾವಳಿ; ಮಲೇಶಿಯಾ ಹಾಗೂ ಇಂಡೋನೇಶಿಯ ದ್ವೀಪಸಮೂಹಗಳು– ಇವೆಲ್ಲ ಈ ಮಹಾಸಾಗರದ ತೀರ ಪ್ರದೇಶಗಳಾಗಿವೆ. ಪಶ್ಚಿಮದ ಬಾಬ್-ಎಲ್-ಮಂದೇಬದ ಜಲಸಂಧಿ, ಕೆಂಪು ಸಮುದ್ರ, ಆ ಮೂಲಕ ಸುಯೇಜ್ ಕಾಲುವೆಯ ಪ್ರವೇಶ ಮಾರ್ಗವಾಗಿದೆ. ಪೂರ್ವದ ಮಲಕ್ಕಾ ಜಲಸಂಧಿ ಪ್ಯಾಸಿಫಿಕ್ಕಿನ ವಿಶಾಲ ಸಾಗರಕ್ಕೆ ಪ್ರವೇಶವನ್ನು ಒದಗಿಸುತ್ತದೆ. ಈ ಮಲಕ್ಕಾ ಜಲಸಂಧಿಯನ್ನು 'ಮೊಸಳೆಯ ಬಾಯಿ' ಎಂದು ಕರೆಯುತ್ತಾರೆ. ಉತ್ತರ ಮಲೇಶಿಯಾ, ಸಿಂಗಾಪುರ ಹಾಗೂ ದಕ್ಷಿಣದ ಇಂಡೋನೇಶಿಯಗಳು ದವಡೆಗಳಂತಿವೆ. ಈ ಮೊಸಳೆ ತನ್ನ ಬಾಯಿಯನ್ನು ಮುಚ್ಚಿ ತೆಗೆದ ಹಲವಾರು ಘಟನೆಗಳು ಇತಿಹಾಸದಲ್ಲಿ ಅಡಗಿವೆ.

ಈ ಮಹಾಸಾಗರದ ವಾಯುವ್ಯಕ್ಕೆ ಪರ್ಶಿಯನ್ ಆಖಾತ, ಅದರ ಓರ್ಮುಜ್ ಬಂದರು ಹಾಗೂ ಬಹರೇನ್ ದ್ವೀಪಸ್ತೋಮಗಳಿವೆ. ಆದರೆ, ಅವು ಮೂಲೆಗುಂಪಾದ ಪ್ರದೇಶಗಳಲ್ಲ; ಹಲವಾರು ಸಾಮ್ರಾಜ್ಯಗಳನ್ನು ಮೂಲೆಗುಂಪಾಗಿಸಿದ ಪ್ರದೇಶಗಳು! ಈ ಆಖಾತದ ಉತ್ತರರದ ದೇಶಗಳಲ್ಲಿ ಭೂಗರ್ಭದಲ್ಲಿ ಹುದುಗಿದ ತೈಲಸಾಗರವೇ ಇದೆ. ಆ ಎಲ್ಲ ದೇಶಗಳಿಗೆ ಪ್ರವೇಶವನ್ನು ಒದಗಿಸುವ ಈ ಪರ್ಶಿಯನ್ ಆಖಾತ ಇಂದಿನ 'ಹಿಂದೂ ಮಹಾಸಾಗರ ರಾಜಕೀಯ'ಕ್ಕೆ ಕೇಂದ್ರಬಿಂದುವಾಗಿದೆ. ಅದರ ಸುತ್ತಲಿನ ಕಡಲು ಕಡಲಿನಲ್ಲಿ ರಶಿಯಾ, ಅಮೇರಿಕಗಳಂಥ ರಾಷ್ಟ್ರಗಳ ಶಸ್ತ್ರಸಜ್ಜಿತ ಯುದ್ಧನೌಕೆಗಳು ಸದಾ ಸನ್ನದ್ಧವಾಗಿರುತ್ತವೆ. ಭೂ–ಸಾಮ್ರಾಜ್ಯ ಮತ್ತು ಸಾಗರ–ಸಾಮ್ರಾಜ್ಯಗಳ ಸಂಚಾರ ಮಾರ್ಗದ ಮೇಲಿನ ಅತೀವ ಆಯಕಟ್ಟಿನ ಸ್ಥಾನದಲ್ಲಿ ಈ ಪರ್ಶಿಯನ್ ಆಖಾತ ಸ್ಥಿರವಾಗಿದೆ.

ಅರಬೀ ಸಮುದ್ರ ಭಾರತ ಮತ್ತು ಅರೇಬಿಯದ ಭೂಶಿರಗಳನ್ನು ಬೇರ್ಪಡಿಸುತ್ತದೆ. ಇಲ್ಲಿಯ ಸಕೋತ್ರಾ ದ್ವೀಪದಿಂದ ಬಾಬ್-ಎಲ್-ಮಂದೇಬ್ ಜಲಸಂಧಿಯನ್ನೂ ಏಡನ್ ಆಖಾತವನ್ನೂ ನಿಯಂತ್ರಿಸಬಹುದಾಗಿದೆ. ಬಂಗಾಲ ಉಪಸಾಗರವು ಭಾರತವನ್ನು ಬರ್ಮಾ ಮತ್ತು ಮಲೇಶಿಯಾಗಳಿಂದ ಬೇರ್ಪಡಿಸುತ್ತದೆ. ಅಂದಮಾನ–ನಿಕೋಬಾರ್ ಇಲ್ಲಿಯ ಮಹತ್ವದ ದ್ವೀಪಗಳು.

ಸಕೋತ್ರಾ, ಏಡನ್ನಿನ ಬಂದರು, ಮಲಕ್ಕಾ ಆಖಾತ, ಬಾಬ್–ಎಲ್–ಮಂದೇಬ್ ಜಲಸಂಧಿ, ಸಿಂಗಾಪುರ ಬಂದರು, ಭಾರತದ ಭೂಶಿರ, ಆಫ್ರಿಕದಲ್ಲಿದ್ದ ಕೇಪ್ ಕಾಲನಿ ಮತ್ತು ಕೇಪ್–ಆಫ್–ಗುಡ್ ಹೋಪ್ ಬಂದರು ಇವೆಲ್ಲವುಗಳ ಆಯಕಟ್ಟಿನ ಮಹತ್ವ ಮತ್ತು ಔಚಿತ್ಯವನ್ನು ಮೊದಲು ಕಂಡುಕೊಂಡ ಶ್ರೇಯಸ್ಸು ಪೋರ್ತುಗೀಜ್ ಗವರ್ನರನಾಗಿದ್ದ ಅಲ್ಬುಕರ್ಕನಿಗೆ ಸಲ್ಲಬೇಕು ಎಂದು ಸರದಾರ ಕೆ. ಎಮ್. ಪಣಿಕ್ಕರ್ ಹೇಳಿದ್ದಾರೆ.

ಈ ಮೇಲೆ ಹೇಳಿದ ದ್ವೀಪಗಳೆಲ್ಲ ಅರಬ್ಬೀ ಸಮುದ್ರ ಮತ್ತು ಬಂಗಾಲ ಉಪಸಾಗರದಲ್ಲಿವೆ. ಹಿಂದೂ ಮಹಾಸಾಗರದಲ್ಲಿಯ ಈ ಸಮುದ್ರ ಮತ್ತು ಉಪಸಾಗರಗಳನ್ನು ಹೊರತುಪಡಿಸಿದರೆ, ಅದರ ಉಳಿದ ದಕ್ಷಿಣದ ಭಾಗದಲ್ಲಿಯೂ ಅನೇಕ ಚಿಕ್ಕ ಪುಟ್ಟ ದ್ವೀಪಗಳಿವೆ. ಇತಿಹಾಸ ಕಾಲದಲ್ಲಿ ಇದ್ದುದಕ್ಕಿಂತ ವರ್ತಮಾನ ಕಾಲದಲ್ಲಿ ಅವುಗಳಿಗೆ ಹೆಚ್ಚಿನ ಸೈನಿಕ ಮಹತ್ವ ಪ್ರಾಪ್ತವಾಗಿದೆ. ಈ ಬದಲಾವಣೆಗೆ ಕೆಳಗಿನ ಕೆಲ ಕಾರಣಗಳನ್ನು ಕೊಡಬಹುದು:

ಮಹತ್ವದ ತೈಲೋತ್ಪಾದಕ ದೇಶಗಳಾದ ಸೌದಿ ಅರೇಬಿಯಾ, ಇರಾಕ್, ಇರಾಣ, ಯುನೈಟೆಡ್ ಅರಬ್ ಅಮಿರೇಟ್ ರಾಷ್ಟ್ರಗಳು, ಬರ್ಮಾ, ಇಂಡೋನೇಶಿಯಾಗಳೆಲ್ಲ ಹಿಂದೂ ಮಹಾಸಾಗರದ ತೀರ ಪ್ರದೇಶಗಳಾಗಿವೆ.

ಈ ತೈಲೋತ್ಪಾದನೆಯ ಸಾಗಾಟ ಮುಖ್ಯವಾಗಿ ಹಿಂದೂ ಮಹಾಸಾಗರದ ಮಾರ್ಗವಾಗಿಯೇ ನಡೆಯುತ್ತದೆ.

ಈ ತೈಲೋತ್ಪಾದನೆಯು ಇಂದಿನ ಔದ್ಯೋಗಿಕ ನಾಗರಿಕತೆಯ ಜೀವನಾಡಿಗಳಾಗಿವೆ.




ರಶಿಯಾ ಮತ್ತು ಅಮೇರಿಕಗಳು ಪರಸ್ಪರ ಸೀಮಾ ರೇಖೆಗಳಿಗೂ ಪರಸ್ಪರ ಹಿನ್ನಾಡುಗಳಿಗೂ ಸಾಧ್ಯವಾದಷ್ಟು ಸಮೀಪವಾಗಿರಲು ಯತ್ನಿಸುತ್ತಿವೆ.

ಇಂಥ ಸೈನಿಕ ಸಾಮೀಪ್ಯವನ್ನು ಒದಗಿಸಬಲ್ಲ ಆತ್ಯಾಧುನಿಕ ಯುದ್ಧೋಪಕರಣಗಳನ್ನೂ ದೂರಗಾಮಿ ಶಸ್ತ್ರಾಸ್ತ್ರಗಳನ್ನೂ ಇಂದಿನ ವಿಜ್ಞಾನ ಈ ಎರಡು ದೇಶಗಳಿಗೂ ಒದಗಿಸಿದೆ.

ಇಂಥ ಯುದ್ಧೋಪಕರಣಗಳ ಹಾಗೂ ಶಸ್ತ್ರಾಸ್ತ್ರಗಳ ಸಂಗ್ರಹಕ್ಕೂ ಪ್ರಯೋಗಕ್ಕೂ ಹಿಂದೂ ಮಹಾಸಾಗರದಲ್ಲಿಯ ಈ ನಡುಗಡ್ಡೆಗಳು ಅಮೇರಿಕಕ್ಕೆ ರಶಿಯಕ್ಕಿಂತಲೂ ಹೆಚ್ಚು ಉಪಯುಕ್ತವಾಗಿವೆ.

ಆದ್ದರಿಂದ, ರಶಿಯವನ್ನು ಸುತ್ತುವರೆಯಬೇಕೆಂಬ ಅಮೇರಿಕದ ಸೈನಿಕ ವ್ಯೂಹದಲ್ಲಿ ಈ ನಡುಗಡ್ಡೆಗಳಿಗೆ ವಿಶೇಷ ಮಹತ್ವವಿದೆ.

ತೈಲೋತ್ಪಾದಕ ದೇಶಗಳಿಂದ ಸಾಗಿಸಲ್ಪಡುವ ತೈಲ ಉತ್ಪಾದನೆಗಳ ಆವಶ್ಯಕತೆ ಅಮೇರಿಕಕ್ಕೂ ಅದರ ಬೆಂಬಲಿಗ ದೇಶಗಳಿಗೂ ಬಹಳವಾಗಿದೆ. ರಶಿಯಕ್ಕೆ ಅದರ ಆವಶ್ಯಕತೆ ಇಲ್ಲ. ತನ್ನ ತೈಲೋತ್ಪಾದನೆಯಲ್ಲಿ ರಶಿಯ [illegible] ಸ್ವಾವಲಂಬಿಯಾಗಿದೆ.

ಆದ್ದರಿಂದ, ನಿರ್ಜನವೆಂದೇ ಹೇಳಬಹುದಾದ ಈ ನಡುಗಡ್ಡೆಗಳಲ್ಲಿ ಈಗ ಯುದ್ಧ ಚಟುವಟಿಕೆಗಳು ಪ್ರಾರಂಭವಾಗಿವೆ. ಅದನ್ನು ತಡೆಯುವ ಪ್ರಯತ್ನದಲ್ಲಿ ರಶಿಯವೂ ಈ ನಡುಗಡ್ಡೆಗಳತ್ತ ತನ್ನ ದೃಷ್ಟಿ ಹಾಯಿಸುತ್ತಿದೆ.

ಈ ದೃಷ್ಟಿಗೆ ಸಿಕ್ಕು ತೊಳಲುತ್ತಿರುವ ಕೆಲವು ನಡುಗಡ್ಡೆಗಳು ಇವು.

## ಸೇಯಚ್ ಶೆಲಿಸ್

ಒಂದು ನೂರ ಹತ್ತು ಚದರ ಮೈಲುಗಳಷ್ಟು ಮಾತ್ರ ವಿಸ್ತಾರವಾದ ಈ ದ್ವೀಪಸ್ತೋಮಕ್ಕೆ ವಿಕ್ಟೋರಿಯಾ ಪಟ್ಟಣವೇ ರಾಜಧಾನಿ. ಇಲ್ಲಿಯ ಸುಮಾರು ೫೮,೦೦೦ ಜನಸಂಖ್ಯೆಗೆ ಇಂಗ್ಲೀಷೇ ಪ್ರಮುಖ ಭಾಷೆ. ೮೫ ನಡುಗಡ್ಡೆಗಳಿಂದ [illegible]

ಡಿವ ಈ ದ್ವೀಪಸ್ತೋಮ ಮಲಗಾಸಿಯಿಂದ ಸಾವಿರ ಮೈಲು ಆಗ್ನೇಯಕ್ಕೆ ಇದೆ. ಮಾಹೆ, ಪ್ರಾಸ್ಲಿನ್, ಸಿಲುಯೆಟ್ ಹಾಗೂ ಲೀ-ಡೈಗೊ ಇವು ಇತರ ಮಹತ್ವದ ದ್ವೀಪಗಳು. ಜನರು ಹೆಚ್ಚಾಗಿ ಆಫ್ರಿಕನ್ನರು ಇಲ್ಲವೆ ಆಫ್ರೋ ಫ್ರೆಂಚರು. ಫ್ರೆಂಚರೇ ಇವನ್ನು ಮೊದಲು ವಸಾಹತುವನ್ನಾಗಿಸಿದವರು. ಮಾಹೆ ಮುಖ್ಯ ದ್ವೀಪ. ೯೦% ರಷ್ಟು ಜನ ಅಲ್ಲಿ ವಾಸಿಸುತ್ತಾರೆ. ಅದು ಅಂತಾರಾಷ್ಟ್ರೀಯ ವಿಮಾನ ನಿಲ್ದಾಣವನ್ನೂ ಹೊಂದಿದೆ. ಪ್ರವಾಸೋದ್ಯಮವು ವಿದೇಶ ವಿನಿಮಯ ಗಳಿಕೆಯ ಮುಖ್ಯ ಮಾರ್ಗ. ಸೇಯ್ ಶೆಲಿಸ್ಸನ್ನು 'ಹಿಂದೂ ಮಹಾಸಾಗರದ ಸ್ವರ್ಗ' ಎಂದು ಕರೆಯುತ್ತಾರೆ. ಇಂದು ಇದೊಂದು ಸ್ವತಂತ್ರ ಗಣರಾಜ್ಯ; ವಾಮಪಂಥವನ್ನೂ ಪುರಸ್ಕರಿಸುವವರ ಸರಕಾರವನ್ನು ಹೊಂದಿದೆ. ಇತ್ತೀಚೆಗೆ ಇಲ್ಲಿ ನಡೆದ ವಿಮಾನಾಪಹರಣದ ಘಟನೆ ಹಿಂದೂ ಮಹಾಸಾಗರದ ರಾಜಕೀಯದ ಒಂದು ಅಂಗ.

## ಬಿಯೋಟ್

ಬಿಯೋಟ್ ಅರ್ಥಾತ್ ಬ್ರಿಟಿಶ್ ಹಿಂದೂ ಮಹಾಸಾಗರ ಪ್ರದೇಶವು ೧೯೬೫ರಲ್ಲಿ ರಚಿತವಾಯಿತು. ಸುಯೆಜಿನ ಪೂರ್ವಕ್ಕೆ ಕಾಲಿಡುವುದಿಲ್ಲ ಎಂದು ಹೊರಟು ಹೋದ ಬ್ರಿಟಿಶರು ಇತ್ತ ಕಡೆಗೆ ಕೈಚಾಚುವುದನ್ನು ಮಾತ್ರ ಬಿಟ್ಟಿಲ್ಲ. ಈ ಬಿಯೋಟಿನಲ್ಲಿ ಚೆಗೋಸ್ ದ್ವೀಪಸ್ತೋಮ, ಅಲ್ದಬ್ರಾ, ಫರ್ಕ್ವಾರ್ ಹಾಗೂ ದರೋಶಿ ಎಂಬ ದ್ವೀಪಗಳು ಸಮಾವೇಶಗೊಳ್ಳುತ್ತವೆ. ಇವುಗಳಲ್ಲಿ ಡೈಗೋಗಾರ್ಶಿಯಾವೇ ಅತ್ಯಂತ ದೊಡ್ಡ ದ್ವೀಪ. ಇದು ಚೆಗೋಸ್ ದ್ವೀಪಸ್ತೋಮದಲ್ಲಿದೆ. ಇದು ಅಮೇರಿಕದ ಸೈನಿಕ ತಾಣ. ರಶಿಯ, ಚೀನ ಮತ್ತು ಏಶಿಯಾದ ಇತರ ಮಹತ್ವದ ದೇಶಗಳ ಕೇಂದ್ರಗಳನ್ನು ಗುರಿಯಾಗಿರಿಸಿಕೊಂಡ ದೂರಗಾಮಿಯಾದ ಅಂತರ್-ಖಂಡ ನಿಯಂತ್ರಿತ ಕ್ಷಿಪಣಿಗಳನ್ನು ಡೈಗೋಗಾರ್ಶಿಯಾದಲ್ಲಿ ಇಟ್ಟಿದ್ದಾರೆ. ಇದು ಅಣ್ವಸ್ತ್ರಗಳ ಕೊತ್ತಳ. ಇಲ್ಲಿಂದ ಅಣ್ವಸ್ತ್ರಗಳು ಏಶಿಯಾ ಹಾಗೂ ಆಫ್ರಿಕ ಖಂಡಗಳಿಗೂ ಸಂಚರಿಸಬಲ್ಲವು.

ಈ ಬಿಯೋಟ್ ದ್ವೀಪಗಳಲ್ಲಿನ ಜನವಸತಿ ಎಂದರೆ ತೆಂಗಿನ ತೋಟಗಳಲ್ಲಿ ಕೆಲಸ ಮಾಡಲು ಕರೆಸಿಕೊಂಡ ಕೆಲ ಸಾವಿರ ಕೂಲಿಯಾಳುಗಳು ಮಾತ್ರ. ಸೈನಿಕ ಛಾವಣಿಗಳಿದ್ದ ಡೈಗೋಗಾರ್ಶಿಯಿಂದಂತೂ ನವಾಗತರಿಗಾಗಿ ಅವರನ್ನು ಹೊರಗಟ್ಟಲಾಗಿದೆ.

ಅಲ್ದಬ್ರಾ ನಡುಗಡ್ಡೆ ಮಲಗಾಸಿ ಗಣರಾಜ್ಯದ ಈಶಾನ್ಯಕ್ಕೆ ಇದೆ. ಬೃಹದಾಕಾರದ ಆಮೆಗಳು ಮತ್ತು ವಿರಳ ಪಕ್ಷಿ ಸಂಕುಲಕ್ಕೆ ಇದು ಪ್ರಸಿದ್ಧ. ಬ್ರಿಟನ್ನಿನ ಒಂದು ಸಂಶೋಧನಾ ಸಂಸ್ಥೆಗೆ ಈ ಇಡೀ ದ್ವೀಪವನ್ನು ಬಾಡಿಗೆ ಕೊಟ್ಟುಬಿಟ್ಟಿದ್ದಾರೆ.

## ಮಾರಿಶಸ್

ಸುಮಾರು ೭೨೦ ಚದರ ಮೈಲುಗಳ ವಿಸ್ತೀರ್ಣದ ಈ ದೇಶದಲ್ಲಿ ೮,೫೦೦೦೦ ರಷ್ಟು ಜನಸಂಖ್ಯೆ ಇದೆ; ಪ್ರತಿ ಚದರ ಮೈಲಿಗೆ ೧೧೦೦ ರಷ್ಟು ಜನಸಾಂದ್ರತೆ ಇದೆ. ಪೋರ್ಟ್ ಲೂಯಿ ಇದರ ರಾಜಧಾನಿ; ಒಂದೂವರೆ ಲಕ್ಷ ಜನಸಂಖ್ಯೆ ಹೊಂದಿದೆ. ಇಂಗ್ಲಿಷ್, ಫ್ರೆಂಚ್ ಹಾಗೂ ಹಿಂದಿ ಉಪಯೋಗವಾಗುವ ಭಾಷೆಗಳು. ಭಾರತೀಯ ಮೂಲದವರೆ ಹೆಚ್ಚು. ಸಕ್ಕರೆ, ಕಾಕಂಬಿ, ಚಹಗಳನ್ನು ಅವರು ನಿರ್ಯಾತ ಮಾಡುತ್ತಾರೆ. ಅಕ್ಕಿ, ತೈಲ, ಹಾಗೂ ಯಂತ್ರ ಸಾಮಗ್ರಿಗಳನ್ನು ಇವರು ತರಿಸಿಕೊಳ್ಳುತ್ತಾರೆ. ಇಲ್ಲಿಯ ನಾಣ್ಯವನ್ನೂ ರೂಪಾಯಿ ಎಂದೇ ಕರೆಯುತ್ತಾರೆ. ಇದು ಈಗ ಸ್ವತಂತ್ರ ದೇಶ, ಕಾಮನ್‌ವೆಲ್ತಿನ ಸದಸ್ಯ ರಾಷ್ಟ್ರ.

ಮುಖ್ಯ ದ್ವೀಪ ಮಾರಿಶಸ್ ಮಲಗಾಸಿಯ ಪೂರ್ವಕ್ಕೆ ಇದೆ. ಜ್ವಾಲಾಮುಖಿಗಳಿಂದ ಈ ದ್ವೀಪ ನಿರ್ಮಿತವಾಗಿದೆ; ಫಲವತ್ತಾಗಿದೆ. ೧೦೦ರಿಂದ ೫೦೦ ಸೆಂಟಿಮೀಟರು ಮಳೆ ಬೀಳುತ್ತದೆ. ಬಿರುಗಾಳಿಗಳು ಈ ದ್ವೀಪವನ್ನು ಸುತ್ತುವರಿದು ಪೀಡಿಸುತ್ತಿರುತ್ತವೆ. ೯೦% ರಷ್ಟು ಭೂಮಿಯಲ್ಲಿ ಕಬ್ಬಿನ ತೋಟಗಳಿವೆ; ೨೮% ಜನ ಈ ತೋಟಗಳಲ್ಲಿ ಕೆಲಸ ಮಾಡುತ್ತಾರೆ. ಅಲ್ಲದೆ, ಚಹ, ತಂಬಾಕು ಮತ್ತು

ಜಾತಿಯ ಸಸ್ಯವನ್ನೂ ಇವರು ಬೆಳೆಯುತ್ತಾರೆ. ಈ ಲೋಳಸರ ಜಾತಿಯ ಸಸ್ಯವನ್ನು ಭೇದಿ ನಿಯಂತ್ರಕ ಔಷಧಗಳ ಉತ್ಪಾದನೆಗಾಗಿ ಬಳಸುತ್ತಾರೆ. ಇದನ್ನು ನಿರ್ಯಾತ ಮಾಡಿ ಆಹಾರ ಧಾನ್ಯಗಳನ್ನು ತರಿಸಿಕೊಳ್ಳುತ್ತಾರೆ. ಈ ದೇಶದಲ್ಲಿ ರೈಲು ಅಪಘಾತಗಳೇ ಸಂಭವಿಸುವದಿಲ್ಲ! ಏಕೆಂದರೆ, ಇಲ್ಲಿ ರೈಲು ಮಾರ್ಗಗಳೇ ಇಲ್ಲ! ರಸ್ತೆಗಳು, ಜಲಮಾರ್ಗಗಳೇ ಸಾಗಾಟದ ದಾರಿಗಳು. ಪೋರ್ಟ್ ಲೂಯಿಯ ಹತ್ತಿರದ ಪ್ಲೇಸನ್ಸ್ ಎಂಬಲ್ಲಿ ಸುಂದರವಾದ ಅಂತರಾಷ್ಟ್ರೀಯ ವಿಮಾನ ನಿಲ್ದಾಣ ಪೂರ್ತವಿದೆ. ರಾಡ್ರಿಗ್ಸ್ ಲಿಗಾ ದೇಗಾ ಹಾಗೂ ಕಾರ್ಗಾದೋಸ್ ಕಾರಾಜೋಸ್ ಎಂಬವು ಇದರ ಅಧೀನ ದ್ವೀಪಗಳು.

## ರೀಯುನಿಯನ್ ದ್ವೀಪಸ್ತೋಮ

ಸೇಂಟ್ ಡೇವಿಸ್ ಇದರ ರಾಜಧಾನಿ. ಫ್ರೆಂಚ್ ಇಲ್ಲಿಯ ಮುಖ್ಯ ಭಾಷೆ. ಜನಸಂಖ್ಯೆ ಸುಮಾರು ಐದು ಲಕ್ಷದಷ್ಟಿದೆ. ಫ್ರ್ಯಾಂಕ್ ಇವರ ನಾಣ್ಯ (ಮೊದಲು ಫ್ರೆಂಚರ ವಸಾಹತವಾಗಿದ್ದರಿಂದ). ಭಾರಿ ಮಳೆಗಳು ಮತ್ತು ರಣಗುಡುವ ಬಿಸಿಲಿನ ದೇಶ ಇದು. ಮಳೆಗಾಲ ಬೇಸಿಗೆಗಳೆರಡೇ ಇಲ್ಲಿಯ ಋತುಗಳು. ಕಬ್ಬಿನ ತೋಟಗಳು ಇಲ್ಲಿಯ ಅರ್ಥವ್ಯವಸ್ಥೆಯ ಆಧಾರವಾಗಿವೆ. ಪರಿಮಳ ದ್ರವ್ಯಗಳಿಗೆ ಬೇಕಾಗುವ ಸಸ್ಯಗಳೂ ಇಲ್ಲಿ ಬೆಳೆಯುತ್ತವೆ.

## ಕೊಮೊರೊ ದ್ವೀಪಗಳು

ಕ್ಷೇತ್ರಫಲ ೮೩೮ ಚದರ ಮೈಲುಗಳು; ಜನಸಂಖ್ಯೆ ಮೂರು ಲಕ್ಷದಷ್ಟು. ಮೂರೋನಿ ಎಂಬುದು ರಾಜಧಾನಿ. ಫ್ರೆಂಚ್ ಈ ಜನರ ಭಾಷೆ. ಅಕ್ಕಿ, ತೈಲ, ಹಾಗೂ ಯಂತ್ರಸಾಮಗ್ರಿಗಳನ್ನು ಆಯಾತಮಾಡಿಕೊಳ್ಳುತ್ತಾರೆ. ತೆಂಗು, ಯಲಾಂಗ್-ಯಲಾಂಗ್, ವೆನಿಲಾದ ಅರ್ಕ, ಮಲ್ಲಿಗೆ ಹೂವುಗಳು, ಗಜನಿಂಬೆ ಸಸ್ಯ, ಕಿತ್ತಳೆ ಹಣ್ಣು ಮತ್ತು ಅದರ ಹೂವುಗಳು, ಗುಲಾಬಿಯ ಹೂವುಗಳು. ಲವಂಗ ಇಂಥ ಸರಕುಗಳನ್ನು ಇವರು ನಿರ್ಯಾತಿಸುತ್ತಾರೆ. [illegible]

ಕುಗಳಿವು. ಇದೆಲ್ಲ ಫ್ರಾನ್ಸ್ ದೇಶಕ್ಕೆ ಹೋಗುತ್ತದೆ. ಪರಿಮಳ ದ್ರವ್ಯಗಳನ್ನೂ ಅತ್ತರುಗಳನ್ನೂ ಕೃತಕ ಸುಗಂಧ ದ್ರವ್ಯಗಳನ್ನು ಉತ್ಪಾದಿಸುವದರಲಿ ಜಗತ್ಪ್ರಸಿದ್ಧವಾದ ಫ್ರಾನ್ಸ್ ದೇಶದಲ್ಲಿಯ ಆ ಸರಕುಗಳ ಉತ್ಪಾದನೆಯ ೬೦% ಭಾಗಕ್ಕೆ ಕೊಮೊರೋದ ಈ ಲವಂಗದ ದ್ವೀಪಗಳೇ ಆಧಾರವಾಗಿವೆ.

ಫ್ರೆಂಚ್ ವಸಾಹತುವಾಗಿದ್ದ ಇವುಗಳ ಮೇಲೆ ಫ್ರೆಂಚ್ ಸಂಸ್ಕೃತಿಯ ಪ್ರಭಾವ ಬಹಳ. ನ್ಯೂ ಗ್ರ್ಯಾಂಡಿ, ಕೊಮೊರೊ, ಮೊಹೇಲಿ ಮತ್ತು ಅನೂಯಿ ಎಂಬ ಮೂರು ಮಹತ್ವದ ದ್ವೀಪಗಳು ಫ್ರೆಂಚರಿಂದ ಸ್ವತಂತ್ರವಾಗಿ ಕೊಮೊರೊ ಗಣರಾಜ್ಯವನ್ನು ರಚಿಸಿಕೊಂಡಿವೆ. ಮೇಯೋಟ್

"ಇದು ಈ ಪ್ರದರ್ಶನದಲ್ಲಿ ಅತಿ ಹೆಚ್ಚು ಮೆಚ್ಚುಗೆ ಗಳಿಸಿದ ಕಲಾಕೃತಿ. ಶೀರ್ಷಿಕೆ '[illegible]' ಎಂದು!"

ಒಂದು ದ್ವೀಪ ಮಾತ್ರ ಸ್ವಾತಂತ್ರ್ಯ ಬಯಸದೆ ಇನ್ನೂ ಫ್ರೆಂಚ್ ವಸಾಹತುವಾಗಿ ಉಳಿದಿದೆ.

ಗ್ರ್ಯಾಂಡಿ, ಕೊಮೊರೊ ದ್ವೀಪ ಮಧ್ಯದಲ್ಲಿ ಕರಥಲಾ ಪರ್ವತದ ಜ್ವಾಲಾಮುಖಿ ಇನ್ನೂ ಇದೆ. ಇದು ರಾಜಕೀಯ ಜ್ವಾಲಾಮುಖಿಯಷ್ಟು ಭೀಕರವಾಗಿರದಿದ್ದರೂ ಜಾಗೃತವಾಗಿದೆ. ಬಹುಶಃ ಇಲ್ಲಿ ಸದಾ ಜಾಗೃತವಾಗಿರುವದೆಂದರೆ ಈ ಜ್ವಾಲಾಮುಖಿ ಒಂದೇ!

## ಮಲಾಗಾಸೆ

ಸುಮಾರು ೨,೨೫,೦೦೦ ಚದರ ಮೈಲುಗಳಷ್ಟು ವಿಸ್ತೀರ್ಣದ ಈ ದೇಶದ ಜನಸಂಖ್ಯೆ ಸುಮಾರು ೬೦ ಲಕ್ಷ. ಜನ ಸಾಂದ್ರತೆ ಪ್ರತಿ ಚದರ ಮೈಲಿಗೆ ೨೫ ಇದೆ.

ತನಾನಾರೈವ್ ಎಂಬುದು ಇದರ ರಾಜಧಾನಿ. ಸಂಗೀತಕ್ಕೂ ಮಲಾಗಾಸೆಗೂ ಯಾವದೋ ಪಾರಾಯಣ ಸಂಬಂಧವಿರಬೇಕು! ಅವರು ಬಳಸುವ ಬಹುತೇಕ ಹೆಸರುಗಳೆಲ್ಲ ನಾದಮಧುರವಿವೆ.

ಮಡಾಗಾಸ್ಕರವು ಮಲಾಗಾಸೆ ಗಣರಾಜ್ಯದ ಮುಖ್ಯ ದ್ವೀಪ; ಪ್ರಪಂಚದಲ್ಲಿಯ ಮೊದಲನೆಯದಲ್ಲದಿದ್ದರೂ ಐದನೆಯ ಅತಿ ದೊಡ್ಡ ದ್ವೀಪ. ಕರಾವಳಿಗುಂಟ ಉಷ್ಣವಲಯದ ದಟ್ಟವಾದ ಜವುಳು ಕಾಡುಗಳುಂಟು. ಮಧ್ಯದ ಪ್ರಸ್ಥಭೂಮಿಯ ಬಯಲುಗಳಲ್ಲಿ ಹುಲ್ಲುಗಾವಲುಗಳುಂಟು. ಪಡುವಲದ ಕಡೆಯ ಕಡಲಿನಲ್ಲಿ ಮೊಸಳೆಗಳು ಇವೆ; ಕಾಡುಗಳಲ್ಲಿ 'ಲೇಮೂರ್' ಜಾತಿಯ ಮಂಗಗಳಿವೆ. ಇವೆರಡನ್ನೂ ನೋಡಲಿಕ್ಕೆಂದು ಬರುವ ಅಮೇರಿಕನ್ನರನ್ನು ದ್ವೀಪದ ತುಂಬ ನೋಡಬಹುದು.

'ಮಡಾಗಾಸ್ಕರದಲ್ಲಿ ಮನುಷ್ಯರಿಗಿಂತ ಮೂರುಪಟ್ಟು ದನಗಳು' ಎಂದು ತಜ್ಞರು ಲೆಕ್ಕ ಮಾಡಿದ್ದಾರೆ. ಮಡಾಗಾಸ್ಕರದಲ್ಲಿ ಸಾರ್ವತ್ರಿಕ ಪ್ರೌಢಮತಧಾನಾಧಿಕಾರದ ತತ್ವದ ಮೇರೆಗೆ ಇನ್ನೂ ವರೆಗೂ ಚುನಾವಣೆಗಳು ನಡೆದಿಲ್ಲ.

ಮಲಾಗಾಸೆಯು ಔದ್ಯೋಗೀಕರಣದ ಹೆಚ್ಚಿನ ಸಾಧ್ಯತೆಗಳನ್ನು ಹೊಂದಿದೆ. ಈಗಾಗಲೇ, ವಾಹನಗಳ ಜೋಡಣೆಯ ಕಾರಖಾನೆಗಳು, ತೈಲಶುದ್ಧೀಕರಣದ ಕಾರಖಾನೆಗಳು, ಜವಳಿ ಗಿರಣಿಗಳು, ರಾಸಾಯನಿಕ ಮತ್ತು ಸಿಮೆಂಟ್ ಕಾರಖಾನೆಗಳು ಮಲಾಗಾಸೆಯಲ್ಲಿ ಸ್ಥಾಪಿತವಾಗಿವೆ. 'ಸಾವಿರ ಸೈನಿಕರ ನಗರ'ವಾದ ತನಾನಾರೈವ್ ಪಟ್ಟಣವಲ್ಲದೆ ತಾಮಾತಿವ್ ಮತ್ತು ಮಾಜುಂಗಾ ಎಂಬವು ದೊಡ್ಡ ಪಟ್ಟಣಗಳಾಗಿರುವಂತೆಯೇ ಬಂದರುಗಳೂ ಆಗಿವೆ.

ಒಂದು ದೃಷ್ಟಿಯಿಂದ ಹೇಳಬೇಕೆಂದರೆ, ಇವೆಲ್ಲ ಚಿಕ್ಕ ನಡುಗಡ್ಡೆಗಳು. ಎಷ್ಟೋ ದ್ವೀಪಗಳಲ್ಲಿ ಜನವಸತಿಯೇ ಇಲ್ಲ. ನಿಷ್ಪಾಪ ಸಾಗರಶಿಶುಗಳಂತೆ ಅವೆಲ್ಲ ತಮ್ಮನ್ನು ಮುತ್ತುವ ತೆರೆಗಳೊಂದಿಗೆ ಚೆಲ್ಲಾಟವಾಡುತ್ತ ಬಿದ್ದುಕೊಂಡಿರುತ್ತವೆ. ಆದರೆ ಇನ್ನು ಮುಂದೆ ಈ ಎಲ್ಲ ನಡುಗಡ್ಡೆಗಳು ಪ್ರಬಲ ರಾಷ್ಟ್ರಗಳ ಸೈನಿಕ ಠಾಣ್ಯಗಳಾಗಲಿವೆ. ಗುಂಡುಮದ್ದುಗಳ ಉಗ್ರಾಣಗಳಾಗಲಿವೆ; ಆಕ್ರಮಕ ಕೊತ್ತಲಗಳಾಗಲಿವೆ. ಈಗ ಸದ್ಯ ಎಲ್ಲ ನಡುಗಡ್ಡೆಗಳು ಶಾಂತವಾಗಿವೆ. ಸ್ತಬ್ಧವಾಗಿವೆ. ಆದರೆ ಇದು ಎಲ್ಲಿಯ ವರೆಗೆ ಹಾಗೆ ಉಳಿಯುತ್ತದೆಯೆನ್ನುವುದನ್ನು ಕಾಲವೇ ನಿರ್ಧರಿಸಬೇಕು.

✡

## ಹಿಂದಿರುಗಲು ಸಾಧ್ಯವಿಲ್ಲ

ಕೆಲವರೇನೋ 'ಮತ್ತೆ ಪ್ರಕೃತಿಯ ಮಡಿಲನ್ನೇ ಸೇರೋಣ, ಸರಳ ಜೀವನವನ್ನು ನಡೆಸೋಣ' ಎನ್ನುತ್ತಾರೆ. ಆದರೆ ಆ ಜೀವನದಲ್ಲಿ ಎಂಥ ಗುಣವೇ ಇದ್ದಿರಲಿ, ಅದಕ್ಕೆ ಹಿಂದಿರುಗುವದು ಸಾಧ್ಯವಲ್ಲ. ಪ್ರಪಂಚ ಬದಲಾಯಿಸಿದೆ, ಒಬ್ಬರಿಬ್ಬರು ಜೀವನವನ್ನು ತೊರೆದು ಸಂನ್ಯಾಸಿಗಳಾಗಬಹುದು, ಇಡೀ ಸಮಾಜ ಹಾಗೆ ಮಾಡಲಾರದು.

# ಆಲ್ಬರ್ಟ್ ಲೂಥಲಿ

ಹ. ಚ. ಸತ್ಯನಾರಾಯಣ ಉರಾಳ

ದಕ್ಷಿಣ ಆಫ್ರಿಕದ ವರ್ಣೀಯ ಜನಾಂಗದ ಮುಖಂಡ ಆಲ್ಬರ್ಟ್ ಜಾನ್ ಲೂಥಲಿ ಅವರಿಗೆ ನೋಬೆಲ್ ಪ್ರಶಸ್ತಿ ದೊರೆತ ವಿಷಯದಲ್ಲಿ ಇಡೀ ಪ್ರಪಂಚವೇ ಸಂತೋಷ ಸೂಚಿಸುತ್ತಿದ್ದರೂ ಆತನ ಮಾತೃಭೂಮಿಯಲ್ಲಿಯ ಆಡಳಿತ ಹಿಡಿದಿರುವ ವರ್ಣವಿದ್ವೇಷಿಗಳ ತಂಡದವರಿಗೆ ಮಾತ್ರ ದಿಗ್ಭ್ರಮೆಯಾಗಿದೆ. ಅಹಿಂಸಾವಾದಿ ಲೂಥಲಿಯ ಕೀರ್ತಿ ಪ್ರಪಂಚದಾದ್ಯಂತ ಹರಡಿರುವುದು, ಪ್ರಪಂಚದ ಜನತೆ ಇವರ ಬಗ್ಗೆ ಇಟ್ಟಿರುವ ವಿಶ್ವಾಸದ ಕುರುಹಾಗಿ ಇವರಿಗೆ ದೊರೆತ ಮನ್ನಣೆ ಇವು ವರ್ಣ-ವಿದ್ವೇಷ ತುಂಬಿದ ಬಿಳಿಯ ಆಡಳಿತಗಾರರನ್ನು ದಂಗುಬಡಿಸಿರುವುದೇ ಅಲ್ಲದೆ ಆ ತಂಡದವರು ಜನಾಭಿಪ್ರಾಯದಿಂದ ದೂರ ಸರಿದಿರುವರೆಂಬುದನ್ನು ಸಾಬೀತುಮಾಡಿ ಕೊಟ್ಟಂತಾಗಿದೆ.

ಲೂಥಲಿಯವರ ಕೀರ್ತಿ ಬೆಳೆದುದು ಬಹು ವೇಗವಾಗಿಯೇ ಎನ್ನಬಹುದು. ಮೊಟ್ಟಮೊದಲು ಆಫ್ರಿಕನ್ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷ ಲೂಥಲಿಯವರನ್ನು ತಮ್ಮ ಗ್ರಾಮದಿಂದ ಎರಡು ವರ್ಷಗಳ ಕಾಲ ಗಡೀಪಾರು ಮಾಡಿದಾಗ ಆಡಳಿತ ಪಕ್ಷಪಾತಿ ಪತ್ರಿಕೆಗಳು ಈ ಸುದ್ದಿಯನ್ನು ಒಳಪುಟಗಳ ಕಟ್ಟಕಡೆಯ ವಿಭಾಗದಲ್ಲಿ ಪ್ರಕಟಿಸಿದವು. ಎರಡು ವರ್ಷಗಳ ನಂತರ ಅವರು ಯಾವ ಸಭೆಯಲ್ಲೂ ಭಾಗವಹಿಸಕೂಡದೆಂಬ ನಿಷೇಧಾಜ್ಞೆ ಪ್ರಕಟಿಸಿದಾಗ ಈ ಸುದ್ದಿಯನ್ನು ಅದೇ ಪತ್ರಿಕೆಗಳು ಸ್ವಲ್ಪ ಹೆಚ್ಚು ಪ್ರಾಮುಖ್ಯವಾಗಿ ಪ್ರಕಟಿಸಿದವು. ೧೯೫೯ರಲ್ಲಿ ಲೂಥಲಿಯವರು ತಮ್ಮ ಗ್ರಾಮ ಬಿಟ್ಟು ಎಲ್ಲೂ ತೆರಳಕೂಡದೆಂದೂ ಯಾವ ಸಭೆಯಲ್ಲೂ ಭಾಗವಹಿಸಕೂಡದೆಂದೂ ನಿರ್ಬಂಧಾಜ್ಞೆ ಹೊರಡಿಸಿದಾಗ ಇದೇ ಪತ್ರಿಕೆಗಳು ಈ ಸುದ್ದಿಗೆ ಪ್ರಥಮ ಸ್ಥಾನವಿತ್ತು ಪುಟದ ಅಗಲಕ್ಕೂ ತುಂಬುವ ತಲೆಬರಹಗಳಿಂದ ಈ ಆಜ್ಞೆಯನ್ನು ಸಾರಿದವು. ಅಲ್ಲದೆ ಈ ಬಗ್ಗೆ ಹಲವು ಸಂಪಾದಕೀಯಗಳೂ ಸಿಡಿದವು.

೧೯೫೨ರಿಂದ ಅಹಿಂಸಾ ಚಳವಳಿ ಕೈಗೊಂಡ ಆಫ್ರಿಕನ್ ರಾಷ್ಟ್ರೀಯ ಕಾಂಗ್ರೆಸ್ಸು ಹಲವಾರು ಮನೆಯಲ್ಲೇ ನಿಂತುಬಿಡುವ ಮುಷ್ಕರಗಳನ್ನು ನಡೆಯಿಸಿ ಯಶಸ್ವಿಯಾಗಿ ತಮ್ಮ ಪ್ರತಿಭಟನೆಯನ್ನು ವ್ಯಕ್ತಪಡಿಸಿತ್ತು. ಇದರಿಂದ ಕೈಗಾರಿಕೆಗಳ ಕ್ಷೇತ್ರದಲ್ಲಿ ಈ ಸಂಸ್ಥೆಯ ಶಕ್ತಿಯ ಅರಿವಾಗಿತ್ತು.

೧೯೫೬-೫೭ ರಲ್ಲಿ ಬಸ್ ದರಗಳ ಏರಿಕೆ ವಿರುದ್ಧ ೬೦,೦೦೦ ಮಂದಿ ಆಫ್ರಿಕನ್ನರು ಪ್ರತಿಭಟಿಸಿ ಬಸ್ ಹತ್ತುವ ಬದಲಾಗಿ ದಿನಂಪ್ರತಿ ೨೦ ಮೈಲಿ ನಡೆಯಲಾರಂಭಿಸಿದರು. ಇದರಿಂದಾಗಿ ಸರಕಾರದ ಗೋಣು ಮುರಿದಂತಾಗಿ ಅದ ಬಸ್ ದರಗಳನ್ನು ಇಳಿಸಿತು. ೧೯೫೬ರ ಡಿಸೆಂಬರಿನಲ್ಲಿ ಜರುಗಿದ ರಾಜದ್ರೋಹ ಮೊಕದ್ದಮೆಗಳು ವರ್ಣೀಯರ ಸಂಘಟನಾಶಕ್ತಿಯ ಬಗ್ಗೆ ಶ್ವೇತ

ವರ್ಣೀಯರಿಗೆ ಗಾಬರಿ ಹುಟ್ಟಿಸಿದವೆನ್ನಬಹುದು. ೧೯೫೯ರ ವೇಳೆಗಂತೂ ಬಿಳಿಯರ ಪ್ರಭುತ್ವದ ಬೆಂಗಲಿಗರಿಗೆ ವರ್ಣೀಯರ ಸಂಘಟನಾ ಶಕ್ತಿ ಬೆದರಿಕೆ ಹುಟ್ಟಿಸುವಷ್ಟು ಪ್ರಬಲವಾಗಿದ್ದಿತು.

ಈ ವೇಳೆಗೆ ವರ್ಣೀಯರ ಸಂಘಟನಾ ಶಕ್ತಿಯ ಬಗ್ಗೆಯೇ ಅಲ್ಲದೆ ಆಲ್ಬರ್ಟ್ ಲೂಥಲಿಯ ವ್ಯಕ್ತಿತ್ವದ ಹಿರಿಮೆಯ ಬಗ್ಗೆ ಸಹ ಬಿಳಿಯ ಅಧಿಕಾರಿಗಳಿಗೆ ಚಿಂತೆ ಮಾಡಿ ತಲೆ ನೋವುಂಟಾಗುವ ಪರಿಸ್ಥಿತಿ ಸಂಭವಿಸಿತ್ತು. ಈ ನಾಯಕನ ವ್ಯಕ್ತಿತ್ವ ವರ್ಣವಿದ್ವೇಷದ ಮೂಲವಾದ ಅಜ್ಞಾನವನ್ನು ದಹಿಸುವಂತಹುದಾಗಿತ್ತು. ಐದು ವರ್ಷಗಳ ಹಿಂದೆ ಈತ ಕೇಪ್ ಟೌನಿನಲ್ಲಿ ಭಾಷಣ ಮಾಡುತ್ತಿದ್ದಾಗ ಅಲ್ಲಿಯ ಬಿಳಿಯರೇ ತಮ್ಮ ತಾಮಸದಿಂದ ತುಂಬಿದ ಆಲಸ್ಯ ಭಾವ ತೊರೆದು ಈತನ ಭಾಷಣಗಳಲ್ಲಿ ಕೇಳಿ ಬಂದ ನೂತನ ವಾಣಿಯಲ್ಲಿ ಚಿತ್ರಿತವಾದ ಒಂದು ನೂತನ ಆಫ್ರಿಕದ ಕಲ್ಪನೆ ಅವರನ್ನು ಆಕರ್ಷಿಸಿತು. ನೋಬೆಲ್ ಪ್ರಶಸ್ತಿ ದೊರೆತ ನಂತರ ನಡೆದ ಒಂದು ಸಭೆಯಲ್ಲಿ ಜನತೆ ಹರ್ಷೋದ್ಗಾರ ಮಾಡುತ್ತಾ, "ದಕ್ಷಿಣ ಆಫ್ರಿಕದ ಮುಂದಿನ ಪ್ರಧಾನಿ" ಎಂದು ಜಯಕಾರಗಳನ್ನು ಮಾಡಿದರು.

ಲೂಥಲಿ ಜೂಲು ಜನಾಂಗದವರ ಒಂದು ಬುಡಕಟ್ಟಿನ ಯಾಜಮಾನ್ಯ ಹೊಂದಿರುವ ಒಂದು ಮನೆತನದಲ್ಲಿ ಜನಿಸಿದ. ಇವರ ಮನೆತನದವರು ಕ್ರಿಶ್ಚಿಯನ್ ಧರ್ಮದೀಕ್ಷೆ ಪಡೆದಿದ್ದವರು. ಬಾಲ್ಯದಿಂದಲೇ ಇವರಿಗೆ ಬುಡಕಟ್ಟಿನ ಯಾಜಮಾನ್ಯ ವಹಿಸಲು ಅರ್ಹವಾದ ಶಿಕ್ಷಣವನ್ನು ನೀಡಲಾಯಿತು. ಗ್ರಾಮದ ಮಿಷನ್ ಶಾಲೆಯಿಂದ ಆಡಮ್ಸ್ ಕಾಲೇಜಿಗೆ ಸೇರಿ ಪದವೀಧರರಾಗಿ ಉಪಾಧ್ಯಾಯರಾಗುವ ಅರ್ಹತೆ ಪಡೆದವರು.

ಜೂಲು ಜನಾಂಗದ ಇತಿಹಾಸ ಮತ್ತು ಸಾಹಿತ್ಯದ ಪ್ರಾಧ್ಯಾಪಕರಾಗಿ ಇವರು ೧೫ ವರ್ಷ ಆಡಮ್ಸ್ ಕಾಲೇಜಿನಲ್ಲಿ ನೆಲಸಿ ವಿದ್ವಾಂಸರೆನಿಸಿಕೊಂಡಿದ್ದರು. ಅನಂತರ ಇವರ ಬುಡಕಟ್ಟಿನ ಜನರು ಇವರನ್ನು ಯಜಮಾನಿಕೆ ವಹಿಸಬೇಕೆಂದು ಬೇಡಿ ಅರ್ಜಿ ಹಾಕಿದರು. ವಿದ್ಯೆ ಮತ್ತು ಪಾಂಡಿತ್ಯಕ್ಕೆ ಮೀಸಲಾಗಿದ್ದ ಇವರ ಜೀವನ ವಿಧಾನವನ್ನು ತ್ಯಜಿಸಿ, ಬುಡಕಟ್ಟಿನ ವ್ಯಾಜ್ಯಗಳು ಮತ್ತು ಗೊಂದಲಗಳಲ್ಲಿ ಮಗ್ನರಾಗಿ, ಬರಡಾದ ಭೂಮಿಯ ವ್ಯವಸಾಯ ನಂಬಿಕೊಂಡು ಕಾಲ ತಳ್ಳುವ ಹವ್ಯಾಸ ಹಚ್ಚಿಕೊಳ್ಳುವ ಬಗ್ಗೆ ಇವರು ಎರಡು ವರ್ಷ ದೀರ್ಘವಾಗಿ ಆಲೋಚಿಸಿದರು. ಆದರೆ ಇವರ ಧರ್ಮ ಶ್ರದ್ಧೆ ಮತ್ತು ತಮ್ಮ ಜನರ ಬಗ್ಗೆ ಇಟ್ಟಿದ್ದ ಪ್ರೀತಿ ವಿಶ್ವಾಸಗಳು ಇವರನ್ನು ಬುಡಕಟ್ಟಿನ ಯಾಜಮಾನ್ಯದ ಜವಾಬ್ದಾರಿಯನ್ನು ಹೊರುವಂತೆ ಪ್ರೇರೇಪಿಸಿತು. ಅನಂತರ ಇವರು ಗ್ರೌಟ್‌ವಿಲ್ಲಿನಲ್ಲಿ ೧೭ ವರ್ಷ ಕಾಲ ಯಜಮಾನರಾಗಿ ಅಧಿಕಾರ ವಹಿಸಿ ನಿರಾಸೆಯಲ್ಲಿ ತೊಳಲುತ್ತಿದ್ದ ತಮ್ಮ ಬುಡಕಟ್ಟಿನ ಜನರಿಗೆ ಅಭಯವನ್ನಿತ್ತು ಧೈರ್ಯ ಸ್ಥೈರ್ಯಗಳನ್ನು ಕಲ್ಪಿಸಿದರು.

ಇದೇ ವೇಳೆಗೆ ಆಫ್ರಿಕ ವರ್ಣೀಯರ ರಾಜಕೀಯ ಭಾವನೆಗಳು ಬಲಗೊಳ್ಳುತ್ತಿದ್ದುವು. ಗ್ರೌಟ್‌ವಿಲ್ಲಿಗೂ ಈ ಗಾಳಿ ಬೀಸಿತ್ತು. ಕೆಲವು ವರ್ಷ ಇಲ್ಲಿನ ಜನಾಂಗಗಳ ಬಾಂಧವ್ಯಗಳ ಸಮಿತಿಯಲ್ಲಿ ಕಾರ್ಯ ನಿರ್ವಹಿಸಿದ. ಲೂಥಲಿ ೧೯೪೬ರಲ್ಲಿ ಆಫ್ರಿಕನ್ ರಾಷ್ಟ್ರೀಯ ಕಾಂಗ್ರೆಸ್ ಸೇರಿ ಅದೇ ವರ್ಷದಲ್ಲಿ ನೇಟಾಲ್ ಪ್ರಾಂತೀಯ ವಿಭಾಗದ ಅಧ್ಯಕ್ಷರಾದರು.

ವರ್ಣಭೇದ ನೀತಿಯ ಆಧಾರದ ಮೇಲೆ ರಚಿತವಾದ ಪ್ರತ್ಯೇಕ ಶಾಸನದ ವಿಧಿಗಳ ವಿರುದ್ಧ ರಾಷ್ಟ್ರೀಯ ಕಾಂಗ್ರೆಸ್ ಶಾಸನ ಉಲ್ಲಂಘನಾ ಚಳುವಳಿಯನ್ನು ೧೯೫೨ರಲ್ಲಿ ಹೂಡಿತು. ಲೂಥಲಿ ತಾವೇ ಸ್ವತಂತ್ರ ಕಾರಗಾರ ಮತ್ತು ಬೆಂಬಲವನ್ನೂ ಇವರು ನೀಡಿದರು. ವ್ಯಕ್ತಿಯ ಗೌರವಕ್ಕೆ ಕುಂದುಂಟು ಮಾಡುವ ಯಾವ ಶಾಸನಕ್ಕೂ ತಲೆ ಬಾಗದಿರುವುದು ಕ್ರಿಶ್ಚಿಯನ್ ಧರ್ಮದ ರೀತ್ಯಾ ಸರಿಯಾಗಿದೆಯೆಂದು ಇವರು ಸ್ಪಷ್ಟಗೊಳಿಸಿದರು. ಅಲ್ಲದೆ ಆಫ್ರಿಕನ್ ದೇಶೀಯರ ಕಷ್ಟ ಮತ್ತು ಪ್ರತ್ಯೇಕವಾಗಿ ಸಾಧ್ಯವಿಲ್ಲವೆಂದು ಭಾವಿಸಿದರು. ನೇಟಾಲಿನಲ್ಲಿ ಸತ್ಯಾಗ್ರಹವನ್ನು ಆರಂಭಿಸಿದ ಮಹಾತ್ಮಾ ಗಾಂಧೀಜಿಯವರ

ಮಹಾತ್ಮನುಯಾಯಿಯಾದ ಲೂಥಲಿ ಸತ್ಯಾಗ್ರಹವನ್ನು ರಾಜಕೀಯ ಅಸ್ತ್ರವೆಂದರಿತಿರುವುದೇ ಅಲ್ಲದೆ, ಬಾಪೂ ಸಾರಿದಂತೆ ಅಹಿಂಸೆಯು ಆಧ್ಯಾತ್ಮಿಕವಾದ ಶಕ್ತಿಯೆಂದೂ ಭಾವಿಸುತ್ತಾರೆ.

ಸರಕಾರ ಬಹುಕಾಲ ಸುಮ್ಮನಿರಲಿಲ್ಲ. ಶಾಸನ ಉಲ್ಲಂಘನೆಯನ್ನು ಬಹು ದೊಡ್ಡ ಅಪರಾಧವೆಂದು ಸಾರಿ ಅದಕ್ಕೆ ಪ್ರತಿಯಾಗಿ ಹಲವು ವರ್ಷಗಳ ಕಠಿಣ ಶಿಕ್ಷೆ, ವಿಪರೀತ ದಂಡ ಹಾಗೂ ಛಡಿ ಏಟಿನ ಹೊಡೆತ ಮೊದಲಾದ ಶಿಕ್ಷೆಗಳನ್ನು ವಿಧಿಸಿ ಚಳುವಳಿಯನ್ನು ಅಡಗಿಸಿತು. ಚಳುವಳಿ ಆರಂಭವಾದ ನಾಲ್ಕು ತಿಂಗಳ ನಂತರ ಸರಕಾರ ಲೂಥಲಿಯನ್ನು ಪ್ರಿಟೋರಿಯಕ್ಕೆ ಕರೆದು, "ಕಾಂಗ್ರೆಸ್ಸಿಗೆ ರಾಜೀನಾಮೆ ಕೊಡಿ, ಇಲ್ಲ ಯಜಮಾನ ಪಟ್ಟ ಬಿಡಿ" ಎಂದು ಸವಾಲು ಹಾಕಿತು. ಲೂಥಲಿಯಂತೂ ಇವಾವುದಕ್ಕೂ ಬೆದರದೆ ಸುಮ್ಮನೆ ಕುಳಿತರು. ನವೆಂಬರ್ ತಿಂಗಳ ಮಧ್ಯದ ವೇಳೆಗೆ ಸರಕಾರ ಇವರನ್ನು ಯಜಮಾನ ಸ್ಥಾನದಿಂದ ಪದಚ್ಯುತಿಗೊಳಿಸಿರುವುದಾಗಿ ಘೋಷಿಸಿತು.

ಇದಕ್ಕುತ್ತರವಾಗಿ ಲೂಥಲಿ, "ನನ್ನ ಆಯುಸ್ಸಿನಲ್ಲಿ ಸುಮಾರು ೩೦ ವರ್ಷಗಳು ಮುಚ್ಚಿದ ಬಾಗಿಲನ್ನು ತಾಳ್ಮೆಯಿಂದ ತಟ್ಟುವ ಕ್ರಿಯೆಯಲ್ಲಿಯೇ ವ್ಯರ್ಥವಾಗಿದೆ ಎಂಬುದನ್ನು ಯಾರು ತಾನೆ ಇಲ್ಲವೆಂದಾರು? ತಾಳ್ಮೆಯ ಪ್ರತಿಫಲವೇನು? ಮೂವತ್ತು ವರ್ಷಗಳಿಂದ ನಮ್ಮ ಹಕ್ಕು ಬಾಧ್ಯತೆಗಳ ಅಪಹರಣ ಮುಂದುವರಿಯುತ್ತಲೇ ಬಂದು, ಇಂದು ನಾವು ಎಲ್ಲ ಹಕ್ಕುಗಳನ್ನೂ ಕಳೆದುಕೊಂಡವರಾಗಿದ್ದೇವೆ.

"ಈ ಹಿನ್ನೆಲೆಯಲ್ಲಿ ಪೂರ್ಣ ಜವಾಬ್ದಾರಿಯನ್ನರಿತು ನಾನು ಆಫ್ರಿಕನ್ ರಾಷ್ಟ್ರೀಯ ಕಾಂಗ್ರೆಸ್ ಧ್ವಜದಡಿಯಲ್ಲಿ ಈ ದುಷ್ಟಾಚಾರಗಳ ವಿರುದ್ಧ ಧೈರ್ಯವಾಗಿ ಸ್ಥಿರವಾಗಿ ಹಾಗೂ ಅಹಿಂಸಾತ್ಮಕವಾಗಿ ಹೋರಾಟ ನಡೆಸಲು ನನ್ನ ಜನರೊಡನೆ ಒಂದುಗೂಡಿದ್ದೇನೆ. ಭವಿಷ್ಯದಲ್ಲಿ ಅಪಮಾನವೋ, ಕಾರಾಗಾರವೋ, ಬಂದಿಗಳ ಶಿಬಿರವೋ, ಛಡಿ ಏಟೋ, ಗಡೀಪಾರೋ, ಇಲ್ಲ ಮರಣವೋ ಏನು ಕಾದಿದೆಯೋ ನನಗೆ ಗೊತ್ತಿಲ್ಲ. ನನ್ನ ಮಾತೃಭೂಮಿಯಾದ ದಕ್ಷಿಣ ಆಫ್ರಿಕ ಒಂದು ನೈಜ ಪ್ರಜಾಪ್ರಭುತ್ವವಾಗಿ ಇಲ್ಲಿಯ ಎಲ್ಲ ಜನಾಂಗಗಳವರೂ ಒಂದೇ ಮನದಿಂದ ಒಂದುಗೂಡುವಂತಹ ದಿನ ಬರುವಂತೆ ದುಡಿಯುವ ನನ್ನ ಮನಃಸ್ಥೈರ್ಯವನ್ನು ಈ ಬೆದರಿಕೆಗಳಾವೂ ಕದಡದಿರಲಿ ಎಂದು ದೇವರನ್ನು ಪ್ರಾರ್ಥಿಸುತ್ತೇನೆ."

ಕೆಲವೇ ದಿನಗಳಲ್ಲಿ ಇವರು ಆಫ್ರಿಕನ್ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ಚುನಾಯಿತರಾಗಿ, ಈ ಸಂಸ್ಥೆಗೆ ಬಹಿಷ್ಕಾರ ಕಟ್ಟುವವರೆಗೆ ಅದೇ ಸ್ಥಾನದಲ್ಲಿದ್ದರು.

ಬಿಳಿಗೂದಲಿನ ಮುಚ್ಚಿರುವ ಇವರ ತಲೆ, ಗಂಭೀರ ಮುಖಮುದ್ರೆ, ಧರ್ಮಶ್ರದ್ಧೆ, ಮನೋ ನಿರ್ಧಾರ ಇವುಗಳು ಆಫ್ರಿಕನ್ ರಾಷ್ಟ್ರೀಯರಲ್ಲಿ ಹಿರಿಯರಿಗೆ ಅತಿ ಮೆಚ್ಚಾದ ಗುಣಗಳು. ಈತನ ಶಾಂತಿ ಅಹಿಂಸಾ ಮನೋವೃತ್ತಿ ಪ್ರತಿಭಟನಾತ್ಮಕ ದೃಷ್ಟಿ ಇವುಗಳಿಂದ ದೇಶೀಯರಲ್ಲಿ ಮಧ್ಯಮ ವರ್ಗ ಹಾಗೂ ಕೆಳವರ್ಗದ ಲಕ್ಷೋಪಲಕ್ಷ ಮಂದಿಯನ್ನು ಇವರು ಒಲಿಸಿಕೊಂಡಿದ್ದಾರೆ. ಈ ಜನರ ಮನಸ್ಸಿನ ಆದರ್ಶಗಳ ಸಂಕೇತವಾಗಿದ್ದಾರೆ ಲೂಥಲಿ. ಇಂದಿನ ಪ್ರಕಾರ ದಬ್ಬಾಳಿಕೆಯ ವಾತಾವರಣದಲ್ಲಿ ತೊಳಲುತ್ತಿರುವ ದಕ್ಷಿಣ ಆಫ್ರಿಕದಲ್ಲಿ ಬೆಳೆಯಬಹುದಾದ ಯಾವ ಸಾಮೂಹಿಕ ಕ್ರಾಂತಿಗೆ ಆಧಾರವಾಗಬಲ್ಲ ರಾಷ್ಟ್ರೀಯ ನಾಯಕ ಲೂಥಲಿ ಎನ್ನುವುದು ಉತ್ಪ್ರೇಕ್ಷೆಯಲ್ಲ. ತನ್ನ ಬಾಂಧವರೊಡನೆ ಹೋರಾಟದಲ್ಲಿ ಸರ್ವವಿಧವಾದ ಯಾತನೆಯನ್ನೂ ಸಹಿಸಿ ರಾಜಕೀಯ ಸಂಘಟನೆಗೆ ದಾರಿ ತೋರಿದ ಲಕ್ಷೋಪಲಕ್ಷ ಮಂದಿಗೆ ಹೊಸದೊಂದು ಉತ್ಸಾಹ, ಭರವಸೆ ಮೂಡಿದಂತಾಗಿದೆ.



**ಮನುಷ್ಯ ತಾನು ಅರಗಿಸಿಕೊಳ್ಳಬಹುದಾದಷ್ಟು ನಂಬಿಕೆಗಳನ್ನು ಮಾತ್ರ ನುಂಗಬೇಕು.**

**—ಹೆವಾಕ್ ಎಲ್ಲಿಸ್**



೧ — ?

ಇವರು... ಜನರ ಹೊಟ್ಟೆ-
ಬಟ್ಟೆಗಾಗಿ.... ಹೆಚ್ಚೆಚ್ಚು
ದುಡಿಯುತ್ತಿದ್ದಾರೆ....

೨



# ನಮ್ಮ ರಾಜಕಾರಣ

## 'ಅಥ'ದಿಂದ 'ಇತಿ' ವರೆಗೆ

ಅಲ್ಲಿರುವ ಫೋಟೋ
ನೋಡಿದರೆ ಗೊತ್ತಾಗಲ್ವೆ ಸಾರ್
ನೀವು ಗಾಂಧಿಗಳು ಅಂತ....

೩






PANDU

೨

ದೇಶದ ಉದ್ಧಾರಕ್ಕಾಗಿ... ಇವರು ಯಾವಾಗಲೂ...
ಸಭಾತ್ಯಾಗ ಮಾಡುತ್ತಿದ್ದರು.....

# ಸ್ವಚ್ಛ, ಆಹ್ಲಾದಕರ ಶ್ವಾಸ ಆರೋಗ್ಯಕರ, ಗಟ್ಟಿ ಹಲ್ಲುಗಳು

## ಕೋಲ್ಗೇಟ್ ಡೆಂಟಲ್ ಕ್ರೀಮ್‌ನ ಕೊಡುಗೆ

ಪ್ರತಿ ಸಲ ಊಟವಾದ ಮೇಲೆ ಕೋಲ್ಗೇಟ್‌ನಿಂದ ಹಲ್ಲುಜ್ಜಿರಿ. ಇದು ಜಗತ್ತಿನಾದ್ಯಂತ ದಂತವೈದ್ಯರು ಶಿಫಾರಸು ಮಾಡುವ ರೀತಿಯಲ್ಲಿ ನಿಮ್ಮ ಹಲ್ಲುಗಳಿಗೆ ರಕ್ಷಣೆ ನೀಡುತ್ತದೆ.

ಹಲ್ಲುಗಳೆಡೆಯಲ್ಲಿ ಉಳಿಯುವ ಆಹಾರ ಕಣಗಳಲ್ಲಿ ರೋಗಾಣುಗಳು ಬೆಳೆಯುತ್ತವೆ. ಇವು ಉಸಿರಿನ ದುರ್ವಾಸನೆಗೆ ಕಾರಣವಾಗುತ್ತವೆ– ಅಲ್ಲದೆ ನೋಯುವ ದಂತಕ್ಷಯವನ್ನುಂಟುಮಾಡುತ್ತವೆ.

ಆದುದರಿಂದ ಯಾವಾಗಲೂ ಆಹಾರವನ್ನು ಸೇವಿಸಿದ ನಂತರ ಕೋಲ್ಗೇಟ್ ರೀತಿಯಲ್ಲಿ ಹಲ್ಲುಜ್ಜಿರಿ. ನಿಮ್ಮ ಶ್ವಾಸವನ್ನು ಶುಚಿಗೊಳಿಸಲು, ಹಲ್ಲುಗಳನ್ನು ಬಿಳುಪಾಗಿಸಲು ಮತ್ತು ದಂತಕ್ಷಯವನ್ನು ಎದುರಿಸಲು ಅದು ಅತ್ಯಂತ ಪರಿಣಾಮಕಾರಿ ಎಂದು ಪ್ರಮಾಣಿತವಾಗಿದೆ.

ಕೋಲ್ಗೇಟ್‌ನಲ್ಲಿ ಆಹ್ಲಾದಕರವಾದ ಪೆಪ್ಪರ್‌ಮಿಂಟ್‌ನ ರುಚಿಯಿದೆ. ಆದ್ದರಿಂದ, ಅದರಿಂದ ಹಲ್ಲುಜ್ಜುವುದು ಆನಂದದಾಯಕವಾಗುತ್ತದೆ.

**ಕೋಲ್ಗೇಟ್‌ನ ವಿಶ್ವಸನೀಯ ಸೂತ್ರವು ಕೆಲಸ ಮಾಡುವ ರೀತಿ:**

ಉಸಿರಿನ ದುರ್ವಾಸನೆಯನ್ನು ಮತ್ತು ದಂತಕ್ಷಯವನ್ನು ಉಂಟುಮಾಡುವ ರೋಗಾಣುಗಳು ಹಲ್ಲುಗಳೆಡೆಯಲ್ಲಿ ಸಿಕ್ಕಿಕೊಂಡ ಆಹಾರ ಕಣಗಳಲ್ಲಿ ಬೆಳೆಯುತ್ತವೆ.

ಕೋಲ್ಗೇಟ್‌ನ ಅಪೂರ್ವವಾದ ಕಾರ್ಯಸೂತ್ರ ನೊರೆ ಹಲ್ಲುಗಳೆಡೆಯನ್ನು ಆಳವಾಗಿ ಪ್ರವೇಶಿಸುತ್ತದೆ ಮತ್ತು ಅಪಾಯಕರವಾದ ಆಹಾರ ಕಣಗಳನ್ನೂ ರೋಗಾಣುಗಳನ್ನೂ ತೊಲಗಿಸುತ್ತದೆ.

ಫಲಿತಾಂಶ: ಆಕರ್ಷಕವಾದ, ಬಿಳುಪಾದ ಹಲ್ಲುಗಳು. ಆತ್ಮವಿಶ್ವಾಸವನ್ನುಂಟುಮಾಡುವ ಶುಚಿಯಾದ ಉಸಿರು ಮತ್ತು ದಂತಕ್ಷಯದ ವಿರುದ್ಧ ರಕ್ಷಣೆ.

**ಕೋಲ್ಗೇಟ್ ಡೆಂಟಲ್ ಕ್ರೀಮ್‌ನಿಂದ ಉಸಿರಿನ ದುರ್ವಾಸನೆಯನ್ನು ನಿವಾರಿಸಿರಿ... ದಂತಕ್ಷಯವನ್ನು ಎದುರಿಸಿರಿ.**




DC.G.74 KN

ದಿಕ್ಕಿನಲ್ಲಿ ಆಗ ತಾನೇ ಹೆಜ್ಜೆ ಇಡುತ್ತಿದ್ದ ಭಾರತದಂತಹ ರಾಷ್ಟ್ರಗಳಿಗೆ ಇದು ಎಂದಿಗಿಂತಲೂ ಅತ್ಯಧಿಕ ಅಗತ್ಯದ ಸಂಗತಿಯಾಗಿತ್ತು. ಭಾರತದಲ್ಲಿ ಬೆಳೆಯಲಾಗುತ್ತಿರುವ ಸರಿ ಸುಮಾರು ಕಾಲಂಶ ಭಾಗದಷ್ಟು ಆಹಾರವೆಲ್ಲ ಇಲಿಗಳಿಗೋ ಇನ್ನಿತರ ಕೀಟಗಳಿಗೋ ಆಹಾರವಾಗುತ್ತಿದ್ದು ಈ ಕ್ಷೇತ್ರದಲ್ಲಿ ಉಜ್ವಲ ಭವಿಷ್ಯ ಕಾದಿದೆಯೆಂಬುದನ್ನು ನಲ್ಲೂರು ಶ್ರೀಪಾದರಾಯರು ತಮ್ಮ ದೂರದೃಷ್ಟಿಯಿಂದ ಕಂಡುಕೊಂಡರು. ಅಲ್ಲದೇ ಆಹಾರ ಧಾನ್ಯದ ಅಭಾವದಿಂದ ಅರೆಹೊಟ್ಟೆಯುಳಿಯುವ ದೇಶಬಾಂಧವರಿಗೆ ತಾನು ಸಲ್ಲಿಸಬಲ್ಲ ಅಳಿಲಸೇವೆ ಇದಾಗುವದೆಂದು ಭಾವಿಸಿದ ಅವರು ಅನೇಕ ವರ್ಷಗಳವರೆಗೆ ಸೇನೆಯ ಕೀಟ ನಿಯಂತ್ರಣ ವಿಭಾಗದಲ್ಲಿ ಸೇವೆ ಸಲ್ಲಿಸಿ ಭಾರತಕ್ಕೆ ಮರಳಿಬಂದವರೇ ಖಾಸಗಿರಂಗದಲ್ಲಿ ಮೊಟ್ಟಮೊದಲ ಕೀಟನಾಶಕ ಉತ್ಪಾದನಾ ಸಂಸ್ಥೆಯೊಂದನ್ನು ಪ್ರಾರಂಭಿಸಿದರು. ಎಲ್ಲ ದಾರ್ಶನಿಕರಂತೆ ಸಮಕಾಲೀನ ವಿಚಾರಧಾರೆಗಿಂತ ಮುನ್ನಡೆದಿದ್ದ ನಲ್ಲೂರು ಶ್ರೀಪಾದರಾಯರು ಆಗ ಇದಕ್ಕಾಗಿ ಭಾರೀ ಬೆಲೆಯನ್ನೇ ತೆರಬೇಕಾಯಿತು. ವಿದೇಶಗಳಲ್ಲಿ ಸೇವೆ ಸಲ್ಲಿಸುವಾಗ ತಾವು ಕಷ್ಟಪಟ್ಟು ಉಳಿಸಿದ ಸರಿ ಸುಮಾರು ಇಪ್ಪತ್ತು ಸಾವಿರದಷ್ಟು ಹಣವನ್ನೆಲ್ಲ ಧಾರೆಯೆರೆದು ಕ್ರಿಮಿನಾಶಕ ಘಟಕ ಪ್ರಾರಂಭಿಸಿದರು. ಎರಡೇ ವರ್ಷದಲ್ಲಿ ಆ ಸಂಸ್ಥೆ ತೀವ್ರವಾಗಿ ನಷ್ಟಹೊಂದಿ ಹಾಕಿದ ಹಣವೆಲ್ಲ ಮುಳುಗಿ ಸಂಸ್ಥೆಯನ್ನು ಮುಚ್ಚಬೇಕಾದ ಪರಿಸ್ಥಿತಿ ಬಂತು. ಮೊದಲನೇ ಮಹಾಯುದ್ಧದಲ್ಲಿ ಗುಂಡಿನೇಟಿನಿಂದ ಸತ್ತವರಿಗಿಂತ ಹೆಚ್ಚು ಮಂದಿ ಟೈಫಸ್ ಎಂಬ ರೋಗಜಂತುವಿನಿಂದ ಸತ್ತರೆಂಬ ಸಂಗತಿ ಯುದ್ಧ ಮುಗಿದು ಕಾಲು ಶತಮಾನವೇ ಕಳೆದರೂ ಈ ದೇಶದ ಜನರಲ್ಲಿ ಕ್ರಿಮಿನಾಶಕಗಳ ಬಗ್ಗೆ ಆಸಕ್ತಿಯನ್ನು ಹುಟ್ಟಿಸದೇ ಇದ್ದದ್ದು ದುರ್ದೈವದ ಸಂಗತಿಯಾಗಿತ್ತು. ಇನ್ನಾವನಾದರೂ ಉದ್ಯಮಿ ಇವರ ಸ್ಥಾನದಲ್ಲಿ ಇದ್ದಿದ್ದರೆ, ನಷ್ಟ ಒದಗಿದ ನಂತರ ಈ ವಿಷಯದಲ್ಲಿ ಇದ್ದ ಆಸಕ್ತಿಯನ್ನೆಲ್ಲ ಕಳೆದುಕೊಂಡು ಯಾವುದಾದರೂ ನೌಕರಿಗೆ ಅಂಟಿಕೊಳ್ಳುತ್ತಿದ್ದನೇನೋ! ರಾವ್ ಆಗ ತಾವಿದ್ದ ಜೆ.ಕೆ. ಸಂಸ್ಥೆಯಲ್ಲಿಯೇ ಒಳ್ಳೆಯ ಸ್ಥಾನದ ನೌಕರಿಯಲ್ಲಿ ಹಾಯಾಗಿ ಇರಬಹುದಿತ್ತು. ಆದರೆ ಛಲ ಬಿಡದ ತ್ರಿವಿಕ್ರಮನಂಥ ವ್ಯಕ್ತಿ ರಾವ್ ಉದ್ಯಮಕ್ಕೆ ಅಚ್ಚೊತ್ತಿದಂತೆ ಹೇಳಿಮಾಡಿಸಿದವರು. ನೌಕರಿಯ ಜತೆ ಜತೆಯಲ್ಲೇ ಈ ಕ್ರಿಮಿನಾಶಕದ ಬಗೆಗಿನ ಉತ್ಸುಕತೆಯನ್ನು ಮತ್ತೆ ಬೆಳೆಸಿಕೊಂಡರು. ಮಂಗಳೂರಿನಲ್ಲಿ ಅಧ್ಯಾಪಕ ವೃತ್ತಿಯಲ್ಲಿದ್ದ ಸಹೋದರ ನಲ್ಲೂರು ಭವಾನಿ ಶಂಕರರಾಯರನ್ನು ಮುಂಬೈಗೆ ಕರೆಸಿಕೊಂಡರು. ೧೯೫೧ ರಲ್ಲಿ ಪುನಃ ಅದೇ ಉದ್ಯೋಗಕ್ಕೆ ಇಳಿದರು. ಖಾದ್ಯತೈಲ ವ್ಯಾಪಾರಿ ಸಂಸ್ಥೆಯೊಂದು ಶೇಂಗಾಕಾಳುಗಳನ್ನು ನಿರ್ಯಾತಮಾಡುತ್ತಿತ್ತು. ಅದನ್ನು ಬಂದರಿನವರೆಗೆ ರೈಲಿನಲ್ಲಿ ಕೊಂಡೊಯ್ಯುವ ಮೊದಲು ಕ್ರಿಮಿರಹಿತಗೊಳಿಸುವ ಕೆಲಸವನ್ನು ನಲ್ಲೂರು ಬಂಧುಗಳು ವಹಿಸಿಕೊಂಡರು. ಗೆದ್ದಲು ನಿಯಂತ್ರಣವನ್ನು ಸಹ ಇವರ ಸಂಸ್ಥೆ ನಂತರ ಕೈಗೆತ್ತಿಕೊಂಡಿತು. ಆದರೆ ಅವರು ಉಛ್ರಾಯಕ್ಕೇರತೊಡಗಿದ್ದು ೧೯೫೭ರ ನಂತರವೆ. ಪ್ರಖ್ಯಾತ ರಘುವಂಶಿ ಮಿಲ್ಸ್ ಗುಂಪಿನ ಬಿಪಿನ್ ಚಂದ್ರ ಮಫತಲಾರು ತಮ್ಮದೊಂದು ಕಾರ್ಖಾನೆಯಲ್ಲಿ ಗೆದ್ದಲನ್ನು ನಾಶಪಡಿಸಿದರೆ ಹತ್ತುಸಾವಿರದಷ್ಟು ಕೊಡುತ್ತೇನೆಂದು ಕಾಂಟ್ರಾಕ್ಟ್ ಮಾಡಿಕೊಂಡು ಸಂಪೂರ್ಣ ಮೊತ್ತವನ್ನು ಮುಂಗಡವಾಗಿ ಕೊಟ್ಟರು.

ಆ ದಿನಗಳಲ್ಲಿ ತಿಂಗಳಿಗೊಮ್ಮೆ ಐದುಸಾವಿರ ರೂಪಾಯಿಗಳ ವ್ಯವಹಾರ ಸಿಗುವುದೂ ಕಷ್ಟದ್ದಾಗಿತ್ತು, ಅದರಲ್ಲಿ ಸಾವಿರ ರೂಪಾಯಿ ಲಾಭ ಗಳಿಸುವದಂತೂ ದೂರವೇ. ಆದರೂ ಧೃತಿಗೆಡದೆ ನಲ್ಲೂರು ಶ್ರೀಪಾದರಾಯರು ತಮ್ಮ ಉದ್ದಿಮೆಯಲ್ಲಿ ಮುಂದುವರಿದರು. ೧೯೫೮ರಲ್ಲಿ ವ್ಯವಹಾರದ ಒತ್ತಡಕ್ಕೆ ಮಣಿದು ನೌಕರಿ ಬಿಟ್ಟು ಸ್ವತಂತ್ರವಾದ ತಮ್ಮ ಉದ್ದಿಮೆಯನ್ನು ಸ್ಥಾಪಿಸಲು ನಿರ್ಧರಿಸಿದರು. ಎರಡೇ ಎರಡು ಸಾವಿರದ ಬಂಡವಾಳದಲ್ಲಿ ಪ್ರೈವೇಟ್ ಲಿಮಿಟೆಡ್ ಕಂಪನಿಯೊಂದನ್ನು ಸ್ಥಾಪಿಸಿದರು. ಮುಂಬಯಿಯ ಪ್ರಖ್ಯಾತ ಫ್ಲೋರಾ ಫೌಂಟನ್ನಿನ ಎದುರಿಗಿರುವ ಯೂಸುಫ್ ಬಿಲ್ಡಿಂಗಿನಲ್ಲಿ ಒಂದು ಮೇಜು ಮತ್ತು ಕುರ್ಚಿಯೊಡನೆ ಅವರ ಆಫೀಸು ಪ್ರಾರಂಭಿಸಲ್ಪ

ಟ್ಟಿತು. ತಿಂಗಳಿಗೆ ೫೦ ರೂಪಾಯಿ ಬಾಡಿಗೆ. ಅಣ್ಣ ತಮ್ಮಂದಿರಿಬ್ಬರೇ ಎಲ್ಲಾ ಕೆಲಸವನ್ನು ನಿಭಾಯಿಸಬೇಕಾಗಿತ್ತು.

ಕ್ರಿಮಿನಾಶಕ ಸಿಂಪಡಿಸುವ ಸ್ಪ್ರೇಯರನ್ನು ಹೆಗಲಿಗೆ ಹೊತ್ತುಕೊಂಡು ಅಲೆದಾಡಿ ಶ್ರಮವಹಿಸಿ ದುಡಿಯಬೇಕಾಯಿತು. ಆರ್ಥಿಕವಾಗಿ ಸ್ವಲ್ಪ ತ್ರಾಣ ಬಂದನಂತರ ಎರಡೋ ಮೂರೋ ನೌಕರರನ್ನು ಇಟ್ಟುಕೊಂಡರು. ನಿರ್ಯಾತ ಮಾಡುವ ಕಡ್ಲೆಕಾಯಿ ಸಿಪ್ಪೆಯನ್ನು ಕ್ರಿಮಿರಹಿತಗೊಳಿಸುವ ಕೆಲಸ ಇನ್ನೇನು ಕೈಗೆ ಬಂತು ಎನ್ನುವಾಗ ಸರಕಾರ ಸೇಂಗಾಕಾಳು, ಸೇಂಗಾಸಿಪ್ಪೆಯ ನಿರ್ಯಾತವನ್ನು ನಿರ್ಬಂಧಿಸಿತು. ಆಗ ಶ್ರೀಪಾದರಾಯರ ಅಗತ್ಯ ಯಾರಿಗೂ ಕಾಣಲಿಲ್ಲ. ಮತ್ತೆ ಆರ್ಥಿಕಸ್ಥಿತಿ ದುರ್ಭರವಾಗಿ ತಮ್ಮ ಕಾರನ್ನು ಮಾರಿದರು. ಇದ್ದ ಕೈಬೆರಳೆಣಿಕೆಯ ನೌಕರರ ಸಂಬಳವನ್ನು ಕೂಡ ಕೊಡಲಾಗದೇ ಪೇಚಾಡಿದರು. ಆಗ ಶ್ರೀಪಾದರಾಯರು ಪಟ್ಟ ಪಾಡು ಹೇಳಲಾಸಲ್ಲ.

ಆ ಸಮಯದಲ್ಲಿ ತಮ್ಮ ಮನೆಯ ಬಾಡಿಗೆ, ಕಿರಾಣಿ ಅಂಗಡಿಯ ಬಿಲ್ಲು, ಕಡೆಗೆ ಮಕ್ಕಳ ಶಾಲೆಯ ಫೀಸನ್ನು ಕೂಡ ಕೊಡಲಾಗುತ್ತಿರಲಿಲ್ಲ. ಆದರೆ ಈಗಿನ ಚಿತ್ರವೇ ಬೇರೆ. ಅವರ "ಪೆಸ್ಟ್ ಕಂಟ್ರೋಲ್ ಇಂಡಿಯಾ ಪ್ರೈ. ಲಿ." ಏಶಿಯದಲ್ಲೇ ದೊಡ್ಡದಾದ ಕೀಟನಾಶಕ ಸಂಸ್ಥೆ. ಮೂವತ್ತು ಶಾಖೆಗಳಿರುವ ಆ ಸಂಸ್ಥೆಯಲ್ಲಿಂದು ಸಾವಿರಕ್ಕೂ ಹೆಚ್ಚು ಜನ ದುಡಿಯುತ್ತಾರೆ. ಆ ಸಂಸ್ಥೆಯ ಉದ್ಯೋಗಿಗಳ ಒಂದು ತಿಂಗಳ ಸಂಬಳವೇ ಆರು ಲಕ್ಷಕ್ಕೂ ಹೆಚ್ಚು ಎಂದರೆ ಅದು ಎಷ್ಟು ದೊಡ್ಡದಾಗಿದೆಯೆನ್ನುವುದು ಅರ್ಥವಾದೀತು. ಅಂದು ಬರೀ ಖುರ್ಚಿ ಮೇಜಿನಿಂದ ಪ್ರಾರಂಭಿಸಲ್ಪಟ್ಟ ಅವರ ಆಫೀಸು ಇಂದು ಅದೇ ಕಟ್ಟಡದಲ್ಲಿ ಎರಡು ಅಂತಸ್ತುಗಳಿಗೆ ವ್ಯಾಪಿಸಿದೆ. ಇಂಥವೇ ಆರು ಆಫೀಸುಗಳು ಬೃಹನ್ಮುಂಬಯಿಯ ಇನ್ನಿತರ ಭಾಗಗಳಲ್ಲಿ ಇವೆ.

ಈ ಯಶಸ್ಸಿನ ಗಾಥೆಯನ್ನು ಓದಿ ಅದೃಷ್ಟದಿಂದಲೇ ಇಂಥ ಭಾಗ್ಯ ಬಂದಿದೆಯೆಂದು ಯಾರಾದರೂ ಎಣಿಸಿದರೆ ತಪ್ಪಾದೀತು. ಶ್ರೀಪಾದರಾಯರನ್ನು ತೀರ ಹತ್ತಿರದಿಂದ ನೋಡಿದರೆ ಮಾತ್ರ ಅವರ ಭಾಗ್ಯ ಮತ್ತು ಯಶಸ್ಸಿನ ರಹಸ್ಯ ಅರ್ಥವಾದೀತು. ಅಗಾಧವಾದ ತಾಳ್ಮೆ, ಶ್ರದ್ಧೆ, ಅವಿರತ ಶ್ರಮ ಮತ್ತು ದುಡಿಮೆಯಲ್ಲಿ ಶಿಸ್ತು ಇವೆಲ್ಲ ಆ ಯಶಸ್ಸಿನ ಹಿಂದೆ ಅಡಗಿವೆ. ಈಗಲೂ ಶ್ರೀಪಾದರಾಯರು ಬೆಳಗ್ಗಿನ ೩-೩೦ಕ್ಕೆ ಏಳುತ್ತಾರೆ. ಮೂರು ತಾಸುಗಳವರೆಗೆ ಧ್ಯಾನ, ವಿಚಾರಗಳಲ್ಲಿ ಮಗ್ನರಾಗುತ್ತಾರೆ. ಈ ಅವಧಿಯೇ ಒಳ್ಳೇ ರಚನಾತ್ಮಕ ವಿಚಾರಗಳಿಗೆ ಅನುಕೂಲವಾದ ಸಮಯ ಎನ್ನುತ್ತಾರೆ ಅವರು. ಹೊಸ ವಿಚಾರಗಳು ಮೂಡಿದಾಗಲೆಲ್ಲ ಅವುಗಳನ್ನು ತಮ್ಮೊಡನೆ ಸದಾ ಇರುವ ಚಿಕ್ಕ ಡಾಯರಿನ ಮೇಲೆ ಗುರುತಿಸಿಕೊಳ್ಳುತ್ತಾರೆ. ಮೂರು ತಾಸುಗಳ ಅಖಂಡ ವಿಚಾರದೊಡನೆ ಆ ದಿನದ ಪ್ರಾರಂಭಕ್ಕೆ ಆತ್ಮವಿಶ್ವಾಸದಿಂದ ಸನ್ನದ್ಧರಾಗುತ್ತಾರೆ. ಮತ್ತು ಆ ಇಡೀ ದಿನ ಸಂಪೂರ್ಣ ಪ್ರಯೋಜನಕರವಾಗುವಂತೆ ನೋಡಿಕೊಳ್ಳುತ್ತಾರೆ.

ಬಾಲ್ಯದಲ್ಲಿ ತಮ್ಮ ತಾಯಿಯಿಂದ ಈ ಕಠಿಣ ಶ್ರಮದ ಮತ್ತು ಆತ್ಮವಿಶ್ವಾಸದ ಪಾಠ ಕಲಿತೆ ಎನ್ನುತ್ತಾರೆ ಶ್ರೀಪಾದರಾಯರು. ಬರೀ ಆರು ವರ್ಷದ ಬಾಲಕನಾಗಿದ್ದಾಗ ತಂದೆ ತೀರಿಹೋದ ನಂತರ ಅವರು ತಾಯಿಯ ಪಾಲನೆಯಲ್ಲಿ ಬೆಳೆದರು. ತಾಯಿಯೇ ಅವರನ್ನು ಈ ಪಡಿಯಚ್ಚಿನಲ್ಲಿ ರೂಪುಗೊಳಿಸಿದಳು. ನಿಜಕ್ಕೂ ಶ್ರೀಪಾದರಾಯರಿಗೆ ತಮ್ಮ ತಾಯಿಯ ಮೇಲೆ ಬಹಳ ಮಮತೆ. ಇಂದಿನವರೆಗೂ ಒಂದು ಬಾರಿಯೂ ಅವಳ ಮಾತನ್ನು ಮೀರಿಲ್ಲವೆಂದು ಅವರು ತುಂಬಾ ಅಭಿಮಾನದಿಂದ ಹೇಳುತ್ತಾರೆ. ರೇಸುಗಳಿಗೆ ಹೋಗಬಾರದು, ಶೇರು ಬಝಾರಗಳಿಗೆ ಹೋಗಕೂಡದು ಮತ್ತು ಇಸ್ಪೀಟು ಆಡಬಾರದು ಎಂಬ ಕರಾರನ್ನು ಅವರ ತಾಯಿ ವಿಧಿಸಿದಳಂತೆ. ಶ್ರೀಪಾದರಾಯರು ಅವುಗಳನ್ನು ಇಂದಿಗೂ ಅನೂಚಾನವಾಗಿ ನಡೆಸಿಕೊಂಡು ಬಂದಿದ್ದಾರೆ.

ಅವರ ಸಾವಿರಾರು ಉದ್ಯೋಗಿಗಳೆಲ್ಲ ಪ್ರಾಮಾಣಿಕ ಮತ್ತು ವಿಶ್ವಾಸಾರ್ಹತೆಯ ಪ್ರತೀ

ಕವೇ ಸರಿ. ಆದ್ದರಿಂದಲೇ ಗಿರಾಕಿ ಮತ್ತು ನೌಕರ ವರ್ಗದ ಪಾರಸ್ಪರಿಕ ವಿಶ್ವಾಸ ಬಿಗಿಯಾದುದ್ದಾಗಿದೆ. ಇದಕ್ಕೆಲ್ಲ ತಾವು ಕೆಲಸಗಾರರಲ್ಲಿ ಇಟ್ಟ ನಂಬಿಕೆಯೇ ಕಾರಣವೆಂದು ಶ್ರೀಪಾದರಾಯರು ಹೇಳುತ್ತಾರೆ. ಕಂಪನಿಯಲ್ಲಿ ಈ ವರೆಗೆ ಒಮ್ಮೆಯೂ ಕಲಹವಾದದ್ದಿಲ್ಲ. ಒಂದು ದೃಷ್ಟಿಯಲ್ಲಿ ಇತರ ಕಂಪನಿಯ ಮಾಲೀಕರಿಗಿಂತ ಇವರು ಭಿನ್ನರಾಗಿದ್ದಾರೆ. ತಮ್ಮ ಉದ್ಯೋಗಿಗಳಿಗೆ ತಮ್ಮ ಕಂಪನಿಯ ಉದ್ಯೋಗದ ಜತೆಯಲ್ಲಿಯೇ ಬೇರೆ ಖಾಸಗಿ ಉದ್ಯೋಗ ಮಾಡಲು ಪ್ರೋತ್ಸಾಹಿಸುತ್ತಾರೆ. ಅಲ್ಲದೇ ಎಷ್ಟೋ ಜನರಿಗೆ ಸಾಲವನ್ನೂ ಕೊಡುವುದುಂಟು. ಅವರ ಆಡಳಿತದ ಎಲ್ಲ ಸ್ತರಗಳಲ್ಲೂ ಕಾರ್ಮಿಕರ ಪಾಲು ಇದೆ. ಖಾಸಗೀ ರಂಗದ ಕಂಪನಿಯಲ್ಲಿ ಕಾರ್ಮಿಕ ಪ್ರತಿನಿಧಿಯೊಬ್ಬ ಡೈರೆಕ್ಟರ್ ಆಗುವದು ಅಪವಾದವೇ! ಆದರೆ ಅವರ ಕಂಪನಿಯ ಆಡಳಿತ ಮಂಡಳಿಯಲ್ಲಿ ಕಾರ್ಮಿಕರಿಂದ ಆಯ್ದ ವ್ಯಕ್ತಿಯೊಬ್ಬಾತ ಡೈರೆಕ್ಟರನಾಗಿರುತ್ತಾನೆ. ಕಂಪನಿಯಲ್ಲಿ ಕಾರ್ಮಿಕ ಸಂಘವಿದ್ದರೂ ಅವರ ಬೃಹತ್-ಸಂಸ್ಥೆಯಲ್ಲಿ ಕಾರ್ಮಿಕ ಸಮಸ್ಯೆ ಉದ್ಭವಿಸಿದ್ದಿಲ್ಲ. ಒಮ್ಮೆ ಯಾವುದೋ ತಪ್ಪು ಕಲ್ಪನೆಯಿಂದ ಕೆಲವು ವ್ಯಕ್ತಿಗಳು ಪ್ರತಿ ಯೂನಿಯನ್ ರಚಿಸಿ ಕೇಸು ನಡೆಸಿದರೂ ಕೊನೆಗೆ ಕಂಪನಿಗೇ ಜಯವಾಗಿ, ಪ್ರತಿ ಯೂನಿಯನ್ ತನ್ನಷ್ಟಕ್ಕೆ ತಾನೇ ಮಾಯವಾಯಿತು. 'ಪೆಸ್ಟ್ ಕಂಟ್ರೋಲ್ ಇಂಡಿಯಾ ಸಂಸ್ಥೆ' ಈಗ ತೀವ್ರವಾಗಿ ಬೆಳೆಯುತ್ತಿದೆ. ಈ ಸಂಸ್ಥೆಯನ್ನು ಭವಿಷ್ಯತ್ತಿನಲ್ಲಿ ಒಂದು ವಿಶ್ವಸ್ಥ ಸಂಸ್ಥೆಯನ್ನಾಗಿ ಮಾರ್ಪಡಿಸಿ ಇದಕ್ಕೆ ಸಂಬಂಧಿಸಿದ ಎಲ್ಲ ವ್ಯಕ್ತಿಗಳ ಧರ್ಮದರ್ಶಿತ್ವ ಆ ಸಂಸ್ಥೆಗೆ ಇರುವಂತೆ ಮಾಡಬೇಕೆಂಬ ಆಶಯ ಶ್ರೀಪಾದರಾಯರದು. ಈ ಬಗ್ಗೆ ಅವರು ಈಗಾಗಲೇ ಕಾರ್ಯ ಪ್ರವೃತ್ತರಾಗಿದ್ದಾರೆ. "ನೌಕರರ ವಿಶ್ವಾಸದಲ್ಲಿಯೇ ಬೆಳೆದು ಭೀಮಕಾಯವಾದ ಇಂಥ ಸಂಸ್ಥೆಗಳ ಉಳಿವು ಇಂಥ ಮಾರ್ಗದಿಂದ ಮಾತ್ರ ಸಾಧ್ಯ," ಎನ್ನುತ್ತಾರೆ ಅವರು.

ವಿದೇಶದಿಂದ ಬರುವಾಗ ಸುಂದರಿಯಾದ ಆರ್ಮೇನಿಯನ್ ಪತ್ನಿಯೊಡನೆ ಮರಳಿದರು. ನಲ್ಕೂರು ಶ್ರೀಪಾದರಾಯರ ಪತ್ನಿ ಶ್ರೀಮತಿ ಲಿಲ್ಲಿ ರಾವ್ ಈಗ ಸಂಪೂರ್ಣವಾಗಿ ಭಾರತೀಯ ಜೀವನಕ್ಕೆ ಪರಿವರ್ತಿತಳಾಗಿದ್ದಾಳೆ. ಆಕೆಯ ವೇಷ ಭೂಷಣವೆಲ್ಲ ಅಪ್ಪಟ ಭಾರತೀಯವೇ! ಆಕೆ ಹಿಂದಿ, ಮರಾಠಿ ಅಲ್ಲದೇ ರಾವ್ ಅವರ ಮಾತೃಭಾಷೆಯಾದ ಕೊಂಕಣಿಯಲ್ಲೂ ಮಾತನಾಡಬಲ್ಲರು. ಇವರಿಗೆ ಮೂರು ಗಂಡು ಮೂರು ಹೆಣ್ಣು ಹೀಗೆ ಒಟ್ಟು ಆರು ಜನ ಮಕ್ಕಳು. ಅವರೆಲ್ಲ ಈಗ ಉನ್ನತ ಸಾಮಾಜಿಕ ಸ್ಥಾನ ಗಳಿಸಿದ್ದಾರೆ.

ರಾವ್ ಅನೇಕ ಸಂಘ ಸಂಸ್ಥೆಗಳ ಕಾರ್ಯನಿರತ ಸದಸ್ಯರೂ ಹೌದು. ಅಖಿಲ ಭಾರತ ಕೀಟನಾಶಕ ಸಂಸ್ಥೆಯ ಸ್ಥಾಪಕ ಅಧ್ಯಕ್ಷ, ಅಖಿಲ ಭಾರತ ಉತ್ಪಾದಕರ ಸಂಘದ ಗೌರವ ಕಾರ್ಯದರ್ಶಿ, ವರ್ಲ್ಡ್ ಯೂನಿಯನ್ ಇಂಟರ್‌ನ್ಯಾಶನಲ್ ಎಂಬ ಸಂಸ್ಥೆಯ ಉಪಾಧ್ಯಕ್ಷರೂ ಅಲ್ಲದೆ ಮುಂಬಯಿಯ ಸಹಕಾರಿ ಸಂಸ್ಥೆಗಳಲ್ಲಿ ಖ್ಯಾತನಾಮವಾದ ರಾಮರಾವ್ ವಿಠ್ಠಲ ಕೋ-ಆಪರೇಟಿವ್ ಬ್ಯಾಂಕಿನ ಅಧ್ಯಕ್ಷರೂ ಹೌದು.

೧೯೮೦ರ ಮಾರ್ಚಿನಲ್ಲಿ ತಮ್ಮ ಗುರುಮಠ ಉತ್ತರ ಕನ್ನಡದ ಶಿರಾಲಿಗೆ ಹೋಗುವಾಗ ಘಟ್ಟಗಳ ಬಳಿ ಕಾರು ಅಪಘಾತಕ್ಕೀಡಾಗಿ ಅವರ ಕಾರಿನ ಡ್ರೈವರ್ (ಆತ ಮುಸ್ಲಿಮ್) ಸತ್ತಾಗ ತಮ್ಮ ನೋವನ್ನೂ ಲೆಕ್ಕಿಸದೇ ಅವರು ತೆಗೆದುಕೊಂಡ ಶ್ರಮ, ಅವರ ಮಾನವೀಯತೆಗೆ ಸಾಕ್ಷಿ.

ಮನಸ್ಸಿದ್ದಲ್ಲಿ ಮಾರ್ಗವಿದ್ದೇ ಇದೆ ಹಾಗೂ ಕಾಯಕವೇ ಕೈಲಾಸ ಎನ್ನುವುದಕ್ಕೆ ನಲ್ಕೂರು ಶ್ರೀಪಾದರಾಯರೆ ನಿದರ್ಶನ.



**ಸುಶೀಲೆಯಾದವಳೆಲ್ಲಿದ್ದಾಳೆಂಬುದನ್ನು ಯಾರು ನಿಕರವಾಗಿ ಹೇಳಬಲ್ಲರು? ಸುಶೀಲವೆಂಬುದು ಅಗ್ಗದ ವಸ್ತುವಲ್ಲ, 'ಸಗ್ಗ'ದ ವಸ್ತು.**

ಡಂಬಾಚಾರ ಮಾಡುವವರನ್ನು **ಆಷಾಢಭೂತಿಗಳೆಂದು** ಕರೆಯುತ್ತೇವೆ. **ಕೋಶಗಳನ್ನು** ನೋಡಿದರೆ, ಕನ್ನಡದಲ್ಲಿ, ಈ ಶಬ್ದಕ್ಕೆ ಬೂಟಾಟಿಕೆ ಮಾಡುವವನು ಎಂಬರ್ಥ ಸಿಗುತ್ತದೆ. ಆದರೆ ಈ ಶಬ್ದ ಹೇಗೆ ಹುಟ್ಟಿತು? ಆಷಾಢಕ್ಕೂ ಕಪಟಕ್ಕೂ ಏನು ಸಂಬಂಧ? ಇದರ ತಳ ಕಾಣಬೇಕಾದರೆ ಜಗತ್ತಿನ ಅತಿ ಪ್ರಸಿದ್ಧ ಪ್ರಾಚೀನ ಕಥಾಕೋಶವಾದ **ಪಂಚತಂತ್ರದಲ್ಲಿ** ಹುಡುಕಬೇಕು. ಅದರಲ್ಲಿ ಒಬ್ಬ ಗುರು ತನ್ನ ಭಕ್ತರಿಂದ ಪಡೆದ ಕಾಣಿಕೆಗಳನ್ನು ಮಾರಿ ಬಂದ ಹಣವನ್ನು ಬಲು ಜೋಪಾನವಾಗಿ ತನ್ನ ಅಂಗಿಯೊಳಗೆ ಬಚ್ಚಿಟ್ಟುಕೊಂಡಿರುತ್ತಾನೆ. ಇದನ್ನು ಹೇಗೋ ಗೊತ್ತುಹಚ್ಚಿದ ಒಬ್ಬ ವಂಚಕ **ಆಷಾಢಭೂತಿ** ಎಂಬ ಹೆಸರಿಟ್ಟುಕೊಂಡು ಅವನ ಶಿಷ್ಯನಾಗಿ ಅತ್ಯಂತ ವಿಧೇಯತೆಯನ್ನು ನಟಿಸಿ ಗುರುವಿನ ನಂಬಿಕೆ ಗಳಿಸುತ್ತಾನೆ. ಒಂದು ದಿನ ಹೊತ್ತು ಸಾಧಿಸಿ ಗಂಟನ್ನು ಅಪಹರಿಸಿಕೊಂಡು ಓಡಿಹೋಗುತ್ತಾನೆ.

ಆದರೆ **ಆಷಾಢಭೂತಿ** ಎಂದರೇನು? ಪಂಚತಂತ್ರ ಮೊದಲಾದ ಪ್ರಾಚೀನ ಭಾರತೀಯ ಕಥೆಗಳಲ್ಲಿ ಹೆಸರುಗಳನ್ನು ಹೆಚ್ಚಾಗಿ ಅನ್ವರ್ಥಕವಾಗಿ ಕೊಡುವುದು ರೂಢಿ. ಈ ದೃಷ್ಟಿಯಿಂದ ನೋಡಿದರೆ **ಆಷಾಢ** ಎಂಬ ಮಾಸಕ್ಕೂ **ಆಷಾಢಭೂತಿಗೂ** ಸಂಬಂಧದ ಎಳೆ ಸಿಗುವುದಿಲ್ಲ. ಆದರೆ **ಆಷಾಢ** ಶಬ್ದಕ್ಕೆ ವಿರಕ್ತರು ಹಿಡಿಯುವ **ದಂಡ** [ಮುತ್ತುಗದ್ದು] ಎಂಬರ್ಥವೂ ಇದೆ. **ಭೂತಿ** ಎಂಬುದು ಆ ಕಾಲದಲ್ಲಿ ಸಾಮಾನ್ಯವಾಗಿ ಹೆಸರಿಗೆ (= ಸಂಪತ್ತು) ಸೇರಿಸಿಕೊಳ್ಳುವ ಒಂದು ಶಬ್ದವಾಗಿತ್ತು. **ಆಷಾಢಭೂತಿಯೆಂಬುದು** ಈ ವಿರಕ್ತಿದ್ಯೋತಕ **ದಂಡವನ್ನು** ಒತ್ತಿಟ್ಟುಕೊಂಡು ಸೃಷ್ಟಿಸಿದ ಅನ್ವರ್ಥಕನಾಮವಾಗಿರಬೇಕು.

ಸಾಹಿತ್ಯದ ಪಾತ್ರಗಳು ಭಾಷೆಯಲ್ಲಿ ಅರ್ಥವತ್ತಾಗಿ ಸೇರಿಕೊಳ್ಳುವುದು ಸಾಮಾನ್ಯ. ಆಷಾಢಭೂತಿ ಅದಕ್ಕೆ ಒಂದು ಉದಾಹರಣೆ. **ಪಂಚತಂತ್ರದ** ಕಥೆಗಳು ಭಾರತದಲ್ಲೆಲ್ಲ ಪ್ರಚಲಿತವಾಗಿದ್ದರೂ ಈ ಪದ (ಕನ್ನಡ, ತೆಲುಗು ಹೊರತು) ಇತರ ದೇಶಭಾಷಾ ಕೋಶಗಳಲ್ಲಿ **ಕಪಟ** ಎಂಬರ್ಥದಲ್ಲಿ ಕಾಣಿಸದೆ ಕನ್ನಡದಲ್ಲಿ ಮಾತ್ರ ರೂಢಿಯಾಗಿರುವುದು ಸೋಜಿಗ. ಪಂಚತಂತ್ರದಿಂದ ಭಾಷೆಯಲ್ಲಿ ಸೇರಿದ ಇನ್ನೂ ಕೆಲ ಹೆಸರುಗಳಲ್ಲಿ **ಕರಟಕ, ದಮನಕ** (ತಂತ್ರಗಾರರ ಜೋಡಿ) ಯನ್ನು ಉದಾಹರಿಸಬಹುದು. ಪುರಾಣಗಳಿಂದ ಅನೇಕ ಹೆಸರುಗಳು ಭಾಷೆಯನ್ನು ಸಂಪನ್ನವಾಗಿ ಮಾಡಿವೆ. **ಶಕುನಿ** (= ತಂತ್ರಗಾರ), **ಧರ್ಮರಾಯ** (= ತನ್ನ ಹಿತಾಹಿತ ನೋಡದೆ ಪರರಿಗೆ ಸವಲತ್ತು ಕೊಡುವವನು), **ಲಂಕಿಣಿ** (= ಆರ್ಭಟದ ಹೆಂಗಸು), **ಚಿತ್ರಲೇಖೆ** (= ಬಹಳ ಚೂಟಿ ತರುಣಿ), **ಭರತ** (= ಭ್ರಾತೃಪ್ರೇಮಿ) ಇತ್ಯಾದಿ ಪಾತ್ರನಾಮಗಳನ್ನು ಆಯಾ ಗುಣವುಳ್ಳವರಿಗೆ ಅನ್ವಯಿಸುವ ನುಡಿಕಟ್ಟುಗಳು ರೂಢಿಗೆ ಬಂದಿವೆ. ಪುರಾಣಕಥೆಗಳ ಪಾತ್ರಗಳೂ ಘಟನೆಗಳೂ ಭಾಷೆಯಲ್ಲಿ ಸಾರ್ಥಕವಾಗಿ ದಿನ ಬಳಕೆಗೆ ಬರುವುದು ಒಂದು ಜಾಗತಿಕ ಲಕ್ಷಣವೇ ಆಗಿದೆ. ಗ್ರೀಕ್ ಪುರಾಣದ **ಅಖಿಲಿಸ್ ತಂಳಿತ** ಇತ್ಯಾದಿಗಳನ್ನು ಉದಾಹರಿಸಬಹುದು.

ಆದರೂ ನಮ್ಮ ಭಾಷೆ ಅರ್ವಾಚೀನ ಸಾಹಿತ್ಯಕ್ಕೆ ಪಾಶ್ಚಾತ್ಯ ಭಾಷೆಗಳಷ್ಟು ಪ್ರತಿ ಸ್ಪಂದಿಸುವುದಿಲ್ಲವೋ ಅನಿಸುತ್ತದೆ. ಶೇಕ್ಸ್ಪಿಯರನ **ಹ್ಯಾಂಲೆಟ್** (= ಅನಿರ್ಧಾರ ಸ್ವಭಾವಕ್ಕೆ), **ಫಾಲ್‌ಸ್ಟಾಫ್** (ಲಾಘವದ ಅಕ್ರಮಪ್ರವೃತ್ತಿಗೆ) ಮೊದಲಾದ ಪಾತ್ರಗಳಂತೂ ಆಯಿತು, ನೂರೇ ವರ್ಷದ ಹಿಂದಿನ ಡಿಕನ್ಸನ ಕಾದಂಬರಿಗಳ **ಬಾರ್ಕಿಸ್** (Barkis is wiling ಎದುರಿನವರು ಸ್ವೀಕರಿಸಬಹುದೇ ಎಂದು ವಿಚಾರಿಸದೆ ಸ್ನೇಹ, ಸಂದೇಶ ಕಳಿಸುತ್ತಿರುವುದು) ಮೊದಲಾದ ಪಾತ್ರಗಳು ಭಾಷೆಗಳಲ್ಲಿ ಪ್ರಯೋಗಿಸಲ್ಪಡುವುದು ನಮ್ಮಲ್ಲಿ ವಿರಳವೆಂದೇ ತೋರುತ್ತದೆ. ಆಧುನಿಕ ಸಾಹಿತ್ಯ ಸರ್ವಜನೀನ ಪ್ರಭಾವವನ್ನು ಬೀರುತ್ತಿಲ್ಲವೋ ನಾವು ಇಂಥದರಲ್ಲಿ ಶೀತಲರೋ ಎಂಬುದು ವಿಚಾರಣೀಯ.

— **ಪಾವೆಂ.**

ಒಂದು ವಿಚಾರ ವಿನೋದ

# ಪರೀಕ್ಷೆ

**'ಸವ್ಯಸಾಚಿ'**

ಹಿಟ್ಲರನ ಪ್ರಚಾರ ಮಂತ್ರಿ ಡಾ. ಗೋಬೆಲ್ಸ್ ಒಮ್ಮೆ ಒಬ್ಬ ಮುದಿ ಯಹೂದ್ಯದ ಪಾದ್ರಿಯೊಡನೆ– "ನೀವು ಯಹೂದ್ಯರು ನಿಮ್ಮ ಧರ್ಮಗ್ರಂಥ 'ತಾಲ್‌ಮುದ್'ಅನ್ನು ಆಧರಿಸಿ ಒಂದು ವಿಶಿಷ್ಟ ರೀತಿಯ ತರ್ಕವನ್ನು ಪ್ರಯೋಗಿಸುತ್ತೀರೆಂದೂ ಅದರಿಂದ ನಿಮ್ಮ ಜಾಣ್ಮೆ ಹೊರಹೊಮ್ಮುವುದೆಂದೂ ಕೇಳಿದ್ದೇನೆ. ನೀನು ನನಗದನ್ನು ಕಲಿಸಿಕೊಡುತ್ತೀಯಾ?" ಎಂದ.

"ಕಲಿಸಲು ನನ್ನದೇನೂ ಆಕ್ಷೇಪವಿಲ್ಲ. ಆದರೆ ಅದನ್ನು ಕಲಿಯುವ ವಯಸ್ಸು ನಿಮ್ಮದಲ್ಲ," ಎಂದ ಪಾದ್ರಿ.

"ಏನು ತಲೆಹರಟೆ? ಈ ವಯಸ್ಸಿನಲ್ಲಿ ನಾನು ಕಲಿಯಲಾರೆನೆ?" ಎಂದು ಕೇಳಿದ ಗೋಬೆಲ್ಸ್.

"ನಿಜವಾಗಿಯೆಂದರೆ ಯಹೂದ್ಯ ಹುಡುಗನೊಬ್ಬ ತಾಲ್‌ಮುದ್‌ಅನ್ನು ಓದಲು ಇಚ್ಛಿಸಿದರೆ ಅವನನ್ನು ಪರೀಕ್ಷಿಸಲು ನಾವು ಮೊದಲು ಮೂರು ಪ್ರಶ್ನೆಗಳನ್ನು ಕೇಳುತ್ತೇವೆ. ಅವಕ್ಕೆ ಆತ ಸರಿಯಾದ ಉತ್ತರ ಕೊಟ್ಟರೆ ಅವನಿಗೆ ತಾಲ್‌ಮುದ್ ಓದಲು ಅನುಮತಿ ಕೊಡುತ್ತೇವೆ. ಸರಿಯಾದ ಉತ್ತರ ಕೊಡದಿದ್ದರೆ ಅವನದನ್ನು ಓದುವಂತಿಲ್ಲ," ಎಂದ ಆತ.

"ಒಳ್ಳೆಯದು. ನನ್ನನ್ನು ಪರೀಕ್ಷಿಸು," ಎಂದ ಗೋಬೆಲ್ಸ್.

"ಕೇಳಿ. ಇಬ್ಬರು ಒಂದು ಹೊಗೆ ನಳಿಗೆಯೊಳಗೆ ಬೀಳುತ್ತಾರೆ. ಅವರಲ್ಲೊಬ್ಬ ಮಸಿಯಿಂದ ಪೂರ್ತಿ ಕಪ್ಪಾಗುತ್ತಾನೆ. ಇನ್ನೊಬ್ಬನಿಗೆ ಒಂದಿಷ್ಟೂ ಮಸಿ ಹತ್ತಿರುವುದಿಲ್ಲ. ಅವರಿಬ್ಬರಲ್ಲಿ ಸ್ನಾನ ಮಾಡಬೇಕೆಂಬ ವಿಚಾರ ಯಾರಿಗೆ ಮೊದಲು ಬರುತ್ತದೆ. ಹೇಳಿರಿ ನೋಡೋಣ?" ಮೊದಲ ಪ್ರಶ್ನೆ ಕೇಳಿದ ಆ ಯಹೂದ್ಯ.

"ಮಸಿ ತಗಲಿದಾತನೇ ಸ್ನಾನಮಾಡುವ," ಎಂದ ಗೋಬೆಲ್ಸ್.

"ತಪ್ಪು...ಮಸಿ ತಗಲದಾತನೇ ಮೀಯುವ," ಎಂದ ಪಾದ್ರಿ.

"ಏಕೆ?" ಬೆರಗಾಗಿ ಪ್ರಶ್ನಿಸಿದ ಗೋಬೆಲ್ಸ್.

"ಏಕೆಂದರೆ ಇಬ್ಬರೂ ಬೀಳುತ್ತಲೇ ಒಬ್ಬರನ್ನೊಬ್ಬರು ನೋಡಿಕೊಳ್ಳುತ್ತಾರೆ. ಮಸಿ ತಗುಲಿದಾತ ಇನ್ನೊಬ್ಬನನ್ನು ಕಂಡು–'ಆಹಾ! ಹೊಗೆ ನಳಿಗೆಯೊಳಗೆ ಬಿದ್ದೂ ನನಗೆ ಮಸಿ ಹತ್ತಿಲ್ಲವಲ್ಲಾ! ಎಂದು ಯೋಚಿಸಿದರೆ, ಮಸಿ ತಗಲಿದಾತ ಮತ್ತೊಬ್ಬನನ್ನು ಕಂಡು, ನಾವಿಬ್ಬರೂ ಕಪ್ಪಾಗಿದ್ದೇವೆ, ಎಂದು ಯೋಚಿಸಿ ಸ್ನಾನಮಾಡಲು ನಿರ್ಧರಿಸುವ," ಎಂದ ಆ ಪಾದ್ರಿ.

"ಶಹಬಾಷ್, ಎರಡನೇ ಪ್ರಶ್ನೆ ಕೇಳು."

"ಎರಡನೇ ಪ್ರಶ್ನೆ– ಇಬ್ಬರು ಒಂದು ಹೊಗೆ ನಳಿಗೆಯೊಳಗೆ ಬೀಳುತ್ತಾರೆ. ಅವರಲ್ಲೊಬ್ಬ ಮಸಿಯಿಂದ ಪೂರ್ತಿ ಕಪ್ಪಾಗುತ್ತಾನೆ. ಆದರೆ ಇನ್ನೊಬ್ಬನಿಗೆ ಒಂದಿಷ್ಟೂ ಮಸಿ ಹತ್ತಿರುವುದಿಲ್ಲ. ಅವರಿಬ್ಬರಲ್ಲಿ ಯಾರು ಮೊದಲು ಸ್ನಾನ ಮಾಡಬೇಕೆಂದು ನಿರ್ಧರಿಸುತ್ತಾರೆ?"

"ಇದು ಮೊದಲನೆಯದೇ ಪ್ರಶ್ನೆ."

"ಅಲ್ಲ. ಇದು ಇನ್ನೊಂದು ಪ್ರಶ್ನೆ."

"ಆಗಲಿ. ಈ ಸಲ ನೀನು ನನ್ನನ್ನು ಸೋಲಿಸಲಾರೆ. ಮಸಿ ತಗಲದಾತನೇ ಸ್ನಾನಮಾಡುತ್ತಾನೆ."

"ತಪ್ಪು!" ಎಂದ ಯಹೂದ್ಯ.

"ಆದರೆ ಇದೀಗ ನೀನೇ ಹಾಗೆ ಹೇಳಿದಿಯಲ್ಲಾ!"

"ಅದು ಬೇರೆ ಪ್ರಶ್ನೆ. ಈ ಸಲ ಮಸಿ ತಗಲಿದಾತನೇ ಮೀಯುವ. ಏಕೆಂದರೆ ಮೊದಲಿನಂತೆಯೇ ಇಬ್ಬರೂ ಪರಸ್ಪರ ನೋಡಿಕೊಂಡಾಗ ಸ್ವಚ್ಛವಿರುವಾತ ಮಸಿ ತಗಲಿದಾತನನ್ನು ಕಂಡು, 'ಅಯ್ಯೊ ನಾನೆಷ್ಟು ಹೊಲಸಾಗಿರುವೆ!' ಎಂದು ಯೋಚಿಸುವ. ಆದರೆ ಆಗಲೇ ತನ್ನ ಕೈಗಳನ್ನು ಕಂಡು ತಾನು ಕೊಳೆಯಾಗಿಲ್ಲವೆಂದು ಅವನಿಗೆ ವಿಚಿತ್ರವಾಗುವುದು. ಆಗ ಮಸಿ ತಗಲಿದಾತನೂ ಸಂಗಾತಿಯನ್ನು ಕಂಡು, 'ನಾನೂ ಹೀಗೆಯೆ ಸ್ವಚ್ಛವಾಗಿರುವೆನೆ?' ಎಂದು ತನ್ನಲ್ಲೇ ಅಂದು ಕೊಳ್ಳುತ್ತಾನೆ. ಮತ್ತೆ ತನ್ನ ಕೈಗಳನ್ನು ಕಂಡಾಗ ಅವು ಕೊಳೆಯಾಗಿರುವುದು ಅವನ ಗಮನಕ್ಕೆ ಬರುತ್ತದೆ. ಆಗ ಅವನು ಸಹಜವಾಗಿಯೇ ಸ್ನಾನ ಮಾಡುತ್ತಾನೆ."

"ಶಹಭಾಸ್! ನಿನ್ನ ಚಾತುರ್ಯಕ್ಕೆ ಎಣೆಯೇ ಇಲ್ಲ. ಈಗ ಮೂರನೇ ಪ್ರಶ್ನೆ ಕೇಳು." ಎಂದ ಗೋಬೆಲ್ಸ್.

"ಮೂರನೆಯದು ಅತಿ ಕಠಿಣವಾದ ಪ್ರಶ್ನೆ. ಇಬ್ಬರು ಒಂದು ಹೊಗೆ ನಳಿಗೆಯೊಳಗೆ ಬೀಳುತ್ತಾರೆ. ಅವರಲ್ಲೊಬ್ಬ......"

"ಇದು ಹಿಂದಿನದೇ ಪ್ರಶ್ನೆ."

"ಅಲ್ಲ......ಶಬ್ದಗಳೇನೋ ಅವೇ. ಆದರೂ ಸಮಸ್ಯೆ ಬೇರೆಯೇ."

"ಹಾಗಾದರೆ ಮಸಿ ತಗಲಿದಾತ ಸ್ನಾನ ಮಾಡುವ."

"ತಪ್ಪು."

"ಮಸಿ ತಗಲದಾತ ಸ್ನಾನಮಾಡುವ."

"ತಪ್ಪು."

"ಹಾಗಿದ್ದರೆ ಸರಿಯಾದ ಉತ್ತರ ಏನು?" ಸಿಡುಕಿನಿಂದ ಕೇಳಿದ ಗೋಬೆಲ್ಸ್.

"ಈ ಪ್ರಶ್ನೆಯೇ ಮೂರ್ಖತನದ್ದೆಂಬುದು ನಿಜವಾದ ಉತ್ತರ. ಏಕೆಂದರೆ ಇಬ್ಬರೂ ಒಟ್ಟಿಗೇ ಹೊಗೆನಳಿಗೆಯಲ್ಲಿ ಬಿದ್ದಿರುವಾಗ ಒಬ್ಬನಿಗೆ ಮಸಿ ಹತ್ತಿ, ಇನ್ನೊಬ್ಬನಿಗೆ ಒಂದಿಷ್ಟೂ ಮಸಿ ಹತ್ತದೆ ಉಳಿಯುವುದಾದರೂ ಹೇಗೆ? ಮತ್ತೆ, ಇಷ್ಟೊಂದು ಸಣ್ಣ ವಿಷಯವನ್ನೂ ತಿಳಿಯಲಾರದ ಮನುಷ್ಯ 'ತಾಲ್‌ಮುದ್'ಅನ್ನು ತಿಳಿದುಕೊಳ್ಳಬಹುದೆ? ನೀವೇ ಹೇಳಿ." ಆ ಯಹೂದ್ಯ ಮಾತು ಮುಗಿಸಿದ.

**ಸಾಮಾನ್ಯವಾಗಿ ನಾವು ಉಸಿರಾಡುವಾಗ ಗಾಳಿ ಮೂಗಿನ ಹೊರಳೆಗಳ, ಮೂಲಕ ಹೋಗುವ, ವೇಗ 'ಟ್ಯೂ ಫೋರ್ಟ್ ಸ್ಕೇಲ್'ನಲ್ಲಿನ 'ಫೋರ್ಸ್ ೨'. ಅಂದರೆ ಸೆಕೆಂಡಿಗೆ ೧೦-ಅಡಿಗಳು (ಅರ್ಥಾತ್ ಸುಮಾರು ಗಂಟೆಗೆ ೭ ಮೈಲುಗಳು). ಈ ವೇಗ ಸುಮಾರಾದ ಗಾಳಿಯ ವೇಗ(breeze)ಕ್ಕೆ ಸಮ.**

*

**೧೩೪೭ ರಿಂದ ೧೩೫೧ ರ ವರೆಗೆ, ಕಪ್ಪು ಸಾವು' (ದೇಹದ ಗ್ರಂಥಿಗಳಿರುವ ಭಾಗದಲ್ಲಿ ಮುಖ್ಯವಾಗಿ ಕಂಕುಳದಲ್ಲಿಯೂ, ತೊಡೆಯ ಸಂದಿಯಲ್ಲಿಯೂ ಏಳುವ ಜೊತೆಗೆ ಶ್ವಾಸಕೋಶ ದ್ರವ್ಯದ ಉರಿಯೂತವಿರುವ, ರಕ್ತ ವಿಷದ ಪ್ಲೇಗು) ಈ ಭೂಮಿಯನ್ನು 'ಧ್ವಂಸ' ಮಾಡಿದಾಗ ೮ ಲಕ್ಷ ಜನ ಬ್ರಿಟನ್ ದೇಶವೊಂದರಲ್ಲೇ ಸಾವಿಗೀಡಾದರು. ಜಗತ್ತಿನಾದ್ಯಂತ ಈ ರೋಗದಿಂದಾಗಿ ಆಗ ಸತ್ತ ಜನರ ಸಂಖ್ಯೆ ೭॥ ಕೋಟಿಗೂ ಮೀರಿತ್ತಂತೆ!**

**–ಸಂಗ್ರಹ: ಎಸ್. ವಿಶ್ವನಾಥ**





ಹಲ್ಲು ಮತ್ತು ಒಸಡುಗಳ ಆರೋಗ್ಯಕ್ಕೆ ಆಧಾರ ? 'ಲವಂಗದ ಎಣ್ಣೆ' — ವಿಶ್ವಸನೀಯ, ಉತ್ತಮ ಉಪಚಾರ!

ಇದಿಗೋ, ಚಿರಕಾಲದಿಂದ ಬಳಕೆಯಲ್ಲಿರುವ
ಲವಂಗದ ಎಣ್ಣೆಯುಳ್ಳ

# ಹೊಸ ಪ್ರಾಮಿಸ್ ಟೂಥ್ ಪೌಡರ್




ಲವಂಗದ ಎಣ್ಣೆಯುಳ್ಳ ಪ್ರಾಮಿಸ್ ಟೂಥ್ ಪೌಡರಿನಿಂದ
ನಿಮಗಾಗುವ ಲಾಭಗಳು :

- ನಿಮ್ಮ ಬಾಯಿಯಿಂದ ದಂತಕ್ಷಯಕಾರೀ ಕೀಟಾಣುಗಳ ಮತ್ತು ದುರ್ವಾಸನೆಯ ನಿವಾರಣೆ.
- ನಿರ್ಮಲ, ಆಹ್ಲಾದಕರ ಶ್ವಾಸ.
- ನಿಮ್ಮ ಒಸಡುಗಳಿಗೆ ಆರೋಗ್ಯದಾಯಕ ಮಾಲಿಶ್.
- ನಿಮ್ಮ ಹಲ್ಲುಗಳಲ್ಲಿ ಬಿಳುಪಿನ ಹೊಳಪು.
- ಪೆಪ್ಪರ್‌ಮಿಂಟ್ ಮತ್ತು ಲವಂಗದೆಣ್ಣೆಯ ಅಪೂರ್ವ ಸ್ವಾದ.

3 ಬಲ್ಸಾರಾ

ನವೀನ-ಅನನ್ಯ, ಲವಂಗದ ಎಣ್ಣೆಯುಳ್ಳ ಪ್ರಾಮಿಸ್ ಟೂಥ್ ಪೌಡರ್

CHAITRA-BLS-436 R KAN




ನಿನ್ನ ಅಭಿಪ್ರಾಯ ಅನವಶ್ಯಕ! ತಕ್ಷಣ ತಿದ್ದು "ಸುತ್ತೋಲೆ" ಅಂತ.



ಶ್ರೀರಾ [ನಿಧಾನ ಪ್ರವೃತ್ತಿಯವರನ್ನು ನಮ್ಮಲ್ಲಿ "ಎಮ್ಮೆ ಮೇಲೆ ಮಳೆ ಹುಯ್ದಂತೆ" ಎನ್ನುವುದುಂಟು. ಭೋರೆಂದು ಮಳೆ ಬೀಳುತ್ತಿದ್ದರೂ ಕೊಂಚವೂ ಲೆಕ್ಕಿಸದೆ, ಹೆಮ್ಮೆಯಿಂದ ನಡೆಯುವುದೇ ಎಮ್ಮೆಯ ವೈಶಿಷ್ಟ್ಯ. ಎಮ್ಮೆಗೆ ಬಹು ಪ್ರಿಯವಾದುದು ನೀರು. ಕೆರೆಗಳಲ್ಲಿ, ನೀರು ತುಂಬಿದ ಹಳ್ಳಗಳಲ್ಲಿ ಇಳಿದು, ಎಮ್ಮೆಗಳು ತಮ್ಮನ್ನೇ ತಾವು ಮರೆತು, ಸ್ವೇಚ್ಛೆಯಾಗಿ ಕಾಲ ಕಳೆಯುವುದು ಅನಂತರ ಮೈಯೆಲ್ಲಾ ಮಣ್ಣು, ಕೆಸರು ಮೆತ್ತಿಕೊಳ್ಳುವುದು ಇಂದಿಗೂ ಗ್ರಾಮಾಂತರ ಪ್ರದೇಶಗಳಲ್ಲಿ ಸಾಮಾನ್ಯ ದೃಶ್ಯ.

ಬತ್ತದ ಕೆಸರು ಗದ್ದೆಗಳನ್ನು ಉಳುಮೆ ಮಾಡುವಲ್ಲಿ ಎಮ್ಮೆಗಳು ಕೋಣಗಳು ಉಪಯುಕ್ತ. ಕೆಸರು ಗದ್ದೆಯೊಳಗೆ ಕಾಲು ಮುಳುಗಿ, ಸಲೀಸಾಗಿ ನೇಗಿಲು ಎಳೆದುಕೊಂಡು ಹೋಗುವ ಈ ಪ್ರಾಣಿ ಕಷ್ಟಸಹಿಷ್ಣು. ಬತ್ತದ ಗದ್ದೆಗಳಿಗೆ ಏಷಿಯದಲ್ಲಿ ಎಮ್ಮೆಗಳ ಕಾಣಿಕೆ ಗಣನೀಯ. ಇವುಗಳ ಶಕ್ತಿ ಯಂತ್ರಗಳನ್ನು ಮೀರಿಸುವಂಥದು. ಇದರಿಂದಾಗಿಯೇ ಎಮ್ಮೆಗಳನ್ನು 'ಜೀವಂತ ಟ್ರ್ಯಾಕ್ಟರು'ಗಳೆಂದು ಕರೆಯಲಾಗಿದೆ. ಸದಾ ನೀರನ್ನು ಇಚ್ಛಿಸುವ ಕಾರಣ ಇದನ್ನು 'ವಾಟರ್ ಬಫೆಲೊ' ಎಂದೂ ಕರೆಯಲಾಗಿದೆ.

ಏಷಿಯ ಖಂಡವೇ ಎಮ್ಮೆಯ ತವರಾಗಿದೆ. ಜಗತ್ತಿನ ಮುಕ್ಕಾಲು ಭಾಗ ಎಮ್ಮೆಗಳು ಈ ಖಂಡದಲ್ಲೇ ಇವೆ. ಜಗತ್ತಿನಾದ್ಯಂತ ಸುಮಾರು ೧೭ ಕೋಟಿ ಎಮ್ಮೆಗಳಿರುವವೆಂದು ಆಹಾರ ಮತ್ತು ಕೃಷಿ ಸಂಸ್ಥೆ (ಎಫ್. ಎ. ಓ.) ಅಂದಾಜು ಮಾಡಿದೆ. ಭಾರತವೊಂದರಲ್ಲೇ ಸುಮಾರು ೬೦ ಕೋಟಿ ಎಮ್ಮೆಗಳಿದ್ದು ಎಫ್. ಎ. ಓ. ನ ೧೯೭೬ರ ಅಂದಾಜು. ಅಲ್ಲಿಂದ ಮುಂದೆ ಪ್ರತಿವರ್ಷ ಒಂದು ಲಕ್ಷ ಎಮ್ಮೆಗಳು ಹೆಚ್ಚುತ್ತಿವೆ.

### ಪುರಾತನ

ಸುಮಾರು ಐದು ಸಾವಿರ ವರ್ಷಗಳಷ್ಟು ಹಿಂದೆಯೇ ಮೊಹೆಂಜೊದಾರೋದ ಜನ ಎಮ್ಮೆಗಳನ್ನು ಸಾಕುತ್ತಿದ್ದರೆಂಬ ಅಭಿಪ್ರಾಯವಿದೆ. ದಕ್ಷಿಣ ಭಾರತದಲ್ಲಿ ಎರಡು ಸಾವಿರ ವರ್ಷಗಳಷ್ಟು ಹಿಂದೆಯೇ ಎಮ್ಮೆಗಳು ನಮ್ಮ ಜನರ ಸಾಕು ಪ್ರಾಣಿಗಳು. ಈಗ ಅಮೇರಿಕ, ಯೂರೋಪ್, ಆಸ್ಟ್ರೇಲಿಯಾಗಳಲ್ಲೂ ಎಮ್ಮೆಗಳ ಸಂಖ್ಯೆ ಗಣನೀಯ.

ಸಾವಿರಾರು ವರ್ಷಗಳಿಂದಲೂ ಎಮ್ಮೆ ರೈತನ ಸಹಚರಿ. ಬೇಸಾಯದಲ್ಲಿ ಆತನ ಸಹಭಾಗಿ. ಜೊತೆಗೆ ಹಾಲು ಕೊಡುವ ಇದೀಗ ಎದುರಾಗಿರುವ ಉರುವಲು ಸಮಸ್ಯೆಗೆ ಬೇಕಾದ ಸಗಣಿಯನ್ನು ಒದಗಿಸುವ ಪ್ರಾಣಿ. ಕರ್ನಾಟಕದ

## ಎನ್. ಗೋಪಾಲಕೃಷ್ಣ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಖ್ಯಾತವಾದ 'ಕಂಬಳ'ದಲ್ಲಿ ಎಮ್ಮೆಗಳ ಓಟ ಅದ್ವಿತೀಯ.

ಬತ್ತದ ಕೆಸರು ಗದ್ದೆಯಲ್ಲಿ ಎಮ್ಮೆ ಮಾಡುವ ಕೆಲಸವನ್ನು ಸಮರ್ಥವಾಗಿ ನಿರ್ವಹಿಸಲು ಯಾವುದೇ ಯಂತ್ರ ಸಾಧನ ನಮ್ಮಲ್ಲಿ ರೂಪಿತವಾಗಿಲ್ಲ. ಎಮ್ಮೆ ನಿಧಾನವಾಗಿ ಚಲಿಸಬಹುದು. ಆದರೆ ಅದು ನಿರ್ವಹಿಸುವ ಕೆಲಸ ಅಚ್ಚರಿ ತರುವಂಥದು. ಮೇಲು ನೋಟಕ್ಕೆ ಮಾತ್ರ ಕೊಳಕಾಗಿ ಕಾಣುವ ಪ್ರಾಣಿ.

ಬತ್ತದ ಬೇಸಾಯಗಾರರಿಗೆ ಎಮ್ಮೆ ಅದೆಷ್ಟು ಅನಿವಾರ್ಯ ಎಂಬುದಕ್ಕೊಂದು ನಿದರ್ಶನ. ರೋಮಿನ ಎಫ್.ಎ.ಓ. ಸಂಸ್ಥೆಯಲ್ಲಿದ್ದ ಡಾ. ಡಬ್ಲ್ಯು ರಾಸ್ ಕಾಕ್‌ರಿಲ್ ಎಂಬ ಎಮ್ಮೆಗಳ ಬಗೆಗಿನ ನುರಿತ ತಜ್ಞರು ತೈವಾನಿನ ಸುಮಾರು ಎಂಬತ್ತು ವರ್ಷದ ವೃದ್ಧೆಯೊಬ್ಬಳನ್ನು ಭೇಟಿಯಾದಾಗ ಆಕೆಯ ಬಳಿಯಿದ್ದ ಎಮ್ಮೆಯ ಬಗ್ಗೆ ಪ್ರಸ್ತಾಪಿಸಲಾಗಿ ಆಕೆ, "ನಾನು ಸತ್ತರೆ, ನನ್ನ ಮನೆಯ ಜನ ದುಃಖಿಸುತ್ತಾರೆ, ನಿಜ. ಸೂಕ್ತ ಮರ್ಯಾದೆಯೊಡನೆ ಅಂತ್ಯಕ್ರಿಯೆಗಳನ್ನು ನೆರವೇರಿಸುತ್ತಾರೆ. ಮುಂದೆ ಎಂದಿನಂತೆ ತಮ್ಮ ಬೇಸಾಯ ಕಾರ್ಯದಲ್ಲಿ ನಿರತರಾಗುತ್ತಾರೆ. ಒಂದು ವೇಳೆ ನನ್ನ ಈ ಎಮ್ಮೆಯೇನಾದರೂ ಸತ್ತುಹೋದಲ್ಲಿ ನನ್ನ ಮನೆಯ ಜನ ಉಪವಾಸ ಬೀಳಬೇಕಾಗುತ್ತದೆ," ಎಂದಳಂತೆ.

### ಎಫ್. ಎ ಓ. ಅಧ್ಯಯನ

ಎಮ್ಮೆಗಳ ತಳಿ ಅಭಿವೃದ್ಧಿ, ಪೋಷಣೆ ಅವುಗಳಿಗೆ ಬರುವ ರೋಗಾದಿಗಳು, ಅವುಗಳ ಹಾಲು ಉತ್ಪಾದನೆ. ಎಮ್ಮೆಗಳ ಮಾಂಸದ ಉಪಯುಕ್ತತೆ, ವಿವಿಧ ರಾಷ್ಟ್ರಗಳಲ್ಲಿ ಎಮ್ಮೆಗಳು ಮೊದಲಾದ ಅಂಶಗಳ ಬಗ್ಗೆ ಎಫ್. ಎ. ಓ. ಅಧ್ಯಯನ ಕೈಗೊಂಡು ಈ ಕ್ಷೇತ್ರದ ತಜ್ಞರಿಂದ ಕೆಲವು ಪ್ರಕಟಣೆಗಳನ್ನು ಹೊರತಂದಿದೆ.

ಆಸ್ಟ್ರೇಲಿಯಾ ದೇಶಕ್ಕೆ ಹತ್ತೊಂಬನೇ ಶತಮಾನದಲ್ಲೇ ಎಮ್ಮೆಗಳನ್ನು ಭಾರತದಿಂದ ಒಯ್ಯಲಾಯಿತಂತೆ. ಆಗ ಇವುಗಳನ್ನು ನಿರುಪಯುಕ್ತ ದಡ್ಡ ಪ್ರಾಣಿಗಳೆಂದು ತಿಳಿದಿದ್ದ ಅಲ್ಲಿನ ಜನರಿಗೆ ಎಮ್ಮೆಯ ಸಾಮರ್ಥ್ಯವನ್ನು ಕಂಡುಕೊಳ್ಳಲು ಸುಮಾರು ಇಪ್ಪತ್ತು ವರ್ಷಗಳೇ ಬೇಕಾದವು. ಇದೀಗ ಎಮ್ಮೆಗಳು ಅಲ್ಲಿ ಹಾಲು ಮತ್ತು ಮಾಂಸಕ್ಕೆ ಪ್ರಸಿದ್ಧ. ಹಾಗಾಗಿ ಅಲ್ಲಿ ಎಮ್ಮೆಗಳ ಸಂಖ್ಯೆಯಲ್ಲಿ ಈಗ ಗಣನೀಯವಾದ ಹೆಚ್ಚಳ. ಈಗ ಅಲ್ಲಿ ಮೂರು ಲಕ್ಷಕ್ಕೂ ಹೆಚ್ಚು ಎಮ್ಮೆಗಳಿವೆ. ಅಲ್ಲದೆ ಅತ್ಯಾಧುನಿಕ ಮಾಂಸ ಉತ್ಪಾದನಾ ಕಾರ್ಖಾನೆಗಳು ಪ್ರಾರಂಭವಾಗಿವೆ. ಎಮ್ಮೆಯ ವಂಶಕ್ಕೆ ಎಷ್ಟು ಬೇಡಿಕೆ ಎಂದರೆ ಪ್ರತಿ ತಿಂಗಳೂ ಚೀನ, ಥಾಯ್‌ಲ್ಯಾಂಡ್, ಇಂಡೋನೇಷಿಯಾಗಳಿಂದ ಹಾಂಗ್‌ಕಾಂಗ್‌ಗೆ ಹತ್ತು ಸಾವಿರಕ್ಕೂ ಹೆಚ್ಚು ಎಮ್ಮೆಗಳ ನಿರ್ಯಾತವಾಗುತ್ತಿವೆ.

## ಬ್ರೆಜಿಲ್ಲಿನಲ್ಲೂ

ಬ್ರೆಜಿಲ್ ದೇಶದಲ್ಲಿ ಸಹಾ ಎಮ್ಮೆ ಆಧಾರಿತ ಕೈಗಾರಿಕೆಗಳು ಬೆಳೆಯುತ್ತಿವೆ. ಅಮೆಜಾನ್ ಬೇಸಿನ್ನಿನಲ್ಲಿ ಸುಮಾರು ಐದು ಲಕ್ಷ ಎಮ್ಮೆಗಳಿವೆಯಂತೆ. ಇಲ್ಲಿಗೆ ಬೇಕಾದ ಎಮ್ಮೆ ತಳಿ ವೃದ್ಧಿ ಸಾಧನೆಗಳೆಲ್ಲ ಭಾರತ ಮತ್ತು ಆಸ್ಟ್ರೇಲಿಯಗಳಿಂದಲೇ ರವಾನೆ.

ಎಮ್ಮೆಯ ಹಾಲೂ ಅಷ್ಟೇ. ಹೆಚ್ಚು ಪಿಷ್ಟಾಂಶಯುಕ್ತವಾದುದು. ಅತಿ ಹೆಚ್ಚು ಮಕ್ಕಳನ್ನು ಪಡೆದೂ ಆರೋಗ ದೃಢಕಾಯರಾದ ಇಲ್ಲಿನ ಜನ, "ಹೆಚ್ಚು ಎಮ್ಮೆಯ ಹಾಲು, ಹೆಚ್ಚು ಎಮ್ಮೆಯ ಮಾಂಸ ಬಿಟ್ಟರೆ ಉತ್ತಮ ಆರೋಗ್ಯಕ್ಕೆ ಶರೀರ ದಾರ್ಢ್ಯಕ್ಕೆ ಇನ್ನೇನೂ ಬೇಡ," ಎನ್ನುತ್ತಾರೆ.

ಎಮ್ಮೆಯ ಹಾಲು ಎಮ್ಮೆಯ ಮಾಂಸಗಳು ಕಾಮೋದ್ದೀಪಕಗಳೆಂಬ ಬಹು ಹಿಂದಿನ ಅಭಿಪ್ರಾಯ ಹಳತಾಗಿದೆ. ಮೇಲಾಗಿ ಕೃಷಿಯಲ್ಲಿ ಅಗತ್ಯವಾದ ಶಕ್ತಿಗೆ ಎಮ್ಮೆಗಳಿಗೆ ಸರಿಸಾಟಿಯಾದ ಪ್ರಾಣಿಗಳಾವವು ? ಸಂಚಾಲಿತ ಶಕ್ತಿಯ ಗಾಡಿಗಳ ಬಗ್ಗೆ ಅಧ್ಯಯನ ಸಂಶೋಧನೆಗಳು ನಡೆಯುತ್ತಿರುವಂತೆ ಎಮ್ಮೆಗಳ ಶಕ್ತಿ ಸಾಮರ್ಥ್ಯದ ಬಗ್ಗೆಯೂ ತೀವ್ರ ಚಿಂತನೆಯಾದಲ್ಲಿ ಕೃಷಿ ಕ್ಷೇತ್ರದಲ್ಲಿ ಅಗತ್ಯವಾಗಿರುವ ಮತ್ತು ಕೊರತೆಯೆನಿಸಿರುವ ಕೃಷಿ ಶಕ್ತಿ (ಫಾರಂ ಪವರ್)ಯನ್ನು ಕೊಂಚ ಮಟ್ಟಿಗಾದರೂ ತುಂಬಬಹುದೇನೋ ●

---

## ಭಾರತದ ವೈಸ್‌ರಾಯ್ ಆಗಿ ಲಾರ್ಡ್ ಲೂಯಿ ಮೌಂಟ್‌ಬ್ಯಾಟನ್ ಮಾಡಿದ ಕಟ್ಟ ಕಡೆಯ ಕೆಲಸ

೧೯೪೫ ನೇ ಇಸವಿ. ಮೌಂಟ್‌ಬ್ಯಾಟನ್ ಆಗ ಸುಪ್ರೀಂ ಕಮಾಂಡರ್. ತಮ್ಮ ಗೆಳೆಯ ಪಾಲನ್‌ಪುರದ ನವಾಬರನ್ನು ನೋಡಿಕೊಂಡು ಹೋಗಲು ಬಂದಾಗ ರಾಜ್ಯದ ಬ್ರಿಟಿಷ್ ರೆಸಿಡೆಂಟ್ ಸರ್ ವಿಲಿಯಂ ಕ್ರಾಫ್ಟರು ಮೌಂಟ್‌ಬ್ಯಾಟನ್ನರ ಬಳಿ ಬಂದು, "ನವಾಬರಿಗೆ ಬಹಳ ಬೇಜಾರಾಗಿದೆ; ಅವರ ಆಸ್ಟ್ರೇಲಿಯನ್ ಪತ್ನಿ ಈಗ ಮುಸ್ಲಿಂ ಆಗಿದ್ದರೂ ವೈಸ್‌ರಾಯ್ ವೇವಲ್ಲರು ಅವಳನ್ನು ರಾಜ್ಯದ ರಾಣಿಯೆಂದು ಪರಿಗಣಿಸಿಲ್ಲ; ಅವಳಿಗೆ 'ಹರ್ ಹೈನೆಸ್' ಎಂಬ ಪದವಿ ಬಂದಿಲ್ಲ. ನೀವು ದಿಲ್ಲಿಗೆ ಹೋದಾಗ ವೈಸ್‌ರಾಯರನ್ನು ಭೇಟಿಮಾಡಿ ಬೇಗಂರವರಿಗೆ 'ಹರ್ ಹೈನೆಸ್' ಪದವಿ ದೊರಕುವಂತೆ ಮಾಡಿದರೆ ನವಾಬರಿಗೂ ಸಂತೋಷ, ಅಷ್ಟೇ ನನಗೆ ಕೂಡ," ಎಂದು ಹೇಳಿದರು.

ಮೌಂಟ್‌ಬ್ಯಾಟನ್ ದಿಲ್ಲಿಗೆ ಬಂದು ವೇವಲ್ಲರನ್ನು ಕಂಡು ಇದನ್ನು ನಿವೇದಿಸಿದಾಗ, "ಇದು ಸಾಧ್ಯವಾಗದ ಮಾತು. ಸರಕಾರ ಇದಕ್ಕೆ ಒಪ್ಪಿದರೆ ದೇಶೀಯ ರಾಜರೆಲ್ಲಾ ಆಂಗ್ಲರನ್ನೇ ಮದುವೆಯಾಗುತ್ತಾರೆ. 'ರಾಜವಂಶ'ವೆಂಬುದೇ ಹೊರಟು ಹೋಗುತ್ತದೆ. ನಿಮ್ಮ ಮನವಿಯನ್ನು ನಾನು ಈಡೇರಿಸಲಾರೆ," ಎಂದರು ವೇವಲ್ಲರು.

೧೯೪೭ ನೇ ಇಸವಿ ಆಗಸ್ಟ್ ೧೪ರ ಮಧ್ಯರಾತ್ರಿ ಸಮಯ. ಮೌಂಟ್‌ಬ್ಯಾಟನ್ ತಮ್ಮ ಛೇಂಬರಿನಲ್ಲಿ ಕುಳಿತಿದ್ದಾರೆ. ಪಾಲನ್‌ಪುರದ ನವಾಬರ ಆಸೆ ಅವರಿಗೆ ಜ್ಞಾಪಕಕ್ಕೆ ಬಂತು. ತಮ್ಮ ಕಾರ್ಯದರ್ಶಿಗೆ ಹೇಳಿ ಕಳುಹಿಸಿ, "ಸರಕಾರ ಪಾಲನ್‌ಪುರದ ನವಾಬರ ಆಸ್ಟ್ರೇಲಿಯನ್ ಪತ್ನಿಯನ್ನು ರಾಣಿ ಎಂದು ಪರಿಗಣಿಸಿ; ಅವಳಿಗೆ 'ಹರ್ ಹೈನೆಸ್' ಎಂಬ ಪದವಿ ನೀಡಿದೆ" ಎಂಬ ವಿಷಯವನ್ನು ಉತ್ತಮವಾದ ಭಾಷೆಯಲ್ಲಿ ಬರೆದು ತರುವಂತೆ ಹೇಳಿದರು. ೧೧-೫೦ ಗಂಟೆಗೆ ಆ ಪತ್ರ ಸಿದ್ಧವಾಯಿತು. ಮೌಂಟ್‌ಬ್ಯಾಟನ್ನರು ಅದಕ್ಕೆ ಸಹಿ ಮಾಡಿದರು. ವೈಸ್‌ರಾಯ್ ಆಗಿ ಮಾಡಿದ ಕಟ್ಟಕಡೆಯ ಕಾರ್ಯ ಅದು.

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ.

ಇಲ್ಲಿ ಪ್ರತಿ ತಿಂಗಳೂ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. ವಕ್ಕಣೆ
(ಅ) ಬರವಣಿಗೆಯ ರೀತಿ (ಆ) ನೆಲಸುವಿಕೆ (ಇ) ನಡೆಯುವುದು (ಈ) ಉಗ್ರಾಣ

೨. ವಖಾರ
(ಅ) ಕೆರಳುವುದು (ಆ) ಸಿಹಿ (ಇ) ಕೊಂಕು (ಈ) ಉಗ್ರಾಣ.

೩. ಕಳತ್ರ
(ಅ) ಕೀಳುತನ (ಆ) ಹೊಳೆಯುವಿಕೆ (ಇ) ಹೆಂಡತಿ (ಈ) ಬೊಬ್ಬಾಟ

೪. ಕ್ರುದ್ಧ
(ಅ) ಉದ್ವಿಗ್ನನಾದ (ಆ) ಸಿಟ್ಟಿನ (ಇ) ಕರಗಿದ್ದ (ಈ) ಒಪ್ಪಿಯಾದ

೫. ಲೋಮಶ
(ಅ) ಗುರಿ ತಪ್ಪಿದ (ಆ) ಆಸೆಬುರುಕ (ಇ) ಸ್ತ್ರೈಣನಾದ (ಈ) ಕೂದಲು ತುಂಬಿದ

೬. ಸ್ಪೃಹಣೀಯ
(ಅ) ಅಭಿಲಾಷೆಪಡಬಹುದಾದ (ಆ) ಉಬ್ಬಿಸಬಹುದಾದ (ಇ) ಸುಡಬಲ್ಲ (ಈ) ಪವಿತ್ರಗಿನ

೭. ತಲಬು
(ಅ) ಕೆರೆ (ಆ) ಸಂಬಳ (ಇ) ನೆನೆಯುತ್ತಿರು (ಈ) ಹೋಗಿ ಮುಟ್ಟು

೮. ದಮ್ಮಸು
(ಅ) ಒಂದು ಬಗೆಯ ರೇಶ್ಮೆಬಟ್ಟೆ (ಆ) ಬಡಿದು ನೆಲಸಮ ಮಾಡುವ ಸಾಧನ (ಇ) ಉಬ್ಬಸ (ಈ) ಧರ್ಮಶಾಲೆ

೯. ಹರತಾಳ
(ಅ) ಶಿವನ ಭಜನೆ (ಆ) ಪ್ರಪಾತ (ಇ) ಪೇಟೆ ಬಂದು ಮಾಡುವಿಕೆ (ಈ) ಉಣ್ಣುವ ಬಟ್ಟಲು

೧೦. ದಮೆ
(ಅ) ಇಂದ್ರಿಯಗಳ ನಿಯಂತ್ರಣ (ಆ) ಜಿರೆ (ಇ) ಕಾಸು (ಈ) ಬಿದಿರಿನ ಸೀಳು

೧೧. ಪ್ರಫುಲ್ಲ
(ಅ) ವಂಚಕ (ಆ) ಉಬ್ಬಿದ (ಇ) ಅರಳಿದ (ಈ) ತೃಪ್ತಿ ಹೊಂದಿದ.

೧೨. ಪ್ರದೋಷ
(ಅ) ವಸತಿ (ಆ) ಸಾಮ್ರಾಜ್ಯದ ಭಾಗ (ಇ) ಆನಂದ (ಈ) ಇರುಳಿನ ಆರಂಭ ಕಾಲ

## ‘ಶಬ್ದ ಭಾಂಡಾರ’ದ ಸರಿಯಾದ ಅರ್ಥಗಳು

೧. **ವಕ್ಕಣೆ** (ಅ) ಬರವಣಿಗೆಯ ರೀತಿ; ಶೈಲಿ; ವಿವರಣೆ; ಉದಾ:— ಪತ್ರದ ವಕ್ಕಣೆ ಕೆರಳಿಸುವಂತಿತ್ತು. [ಸಂ. ವ್ಯಾಖ್ಯಾನದಿಂದ ಪ್ರಾಕೃತ ವಖ್ಖಾಣ]

೨. **ವಖಾರ** (ಈ) ಉಗ್ರಾಣ, ಸರಕು ಸಂಗ್ರಹಿಸಿಡುವ ಕೋಣೆ. ಉದಾ:— ಹತ್ತಿಕಾಳಿನ ವಖಾರ. [ಮರಾಠಿ]

೩. **ಕಳತ್ರ** (ಇ) ಹೆಂಡತಿ, ಪತ್ನಿ. ಉದಾ:— ಅವನಿಗೆ ಕಳತ್ರಯೋಗ ಚೆನ್ನಾಗಿಲ್ಲ. [ಸಂ.]

೪. **ಕ್ರುದ್ಧ** (ಅ) ಸಿಟ್ಟುಗೊಂಡ, ಕೆರಳಿದ. ಉದಾ:— ಕ್ರುದ್ಧನಾದ ಅಧಿಕಾರಿ. [ಸಂ. ಕ್ರುಧ್ – ಸಿಟ್ಟಾಗು]

೫. **ಲೋಮಶ** (ಈ) ಕೂದಲು ತುಂಬಿದ, ಕೂದಲು ಕೂದಲಾದ; ಕೂದಲಿನಂಥ ರಚನೆಯುಳ್ಳ. ಉದಾ:— ಅವನ ಲೋಮಶವಾದ ಎದೆ. [ಸಂ. ಲೋಮ = ಕೂದಲು + ಶ]

೬. **ಸ್ಪೃಹಣೀಯ** (ಅ) ಅಭಿಲಾಷೆಪಡಬಹುದಾದ, ಆಸೆಪಡಲುತಕ್ಕ, ಬಯಸಬಹುದಾದ. ಉದಾ:— ಸ್ಪೃಹಣೀಯವಾದ ಸೌಂದರ್ಯ. [ಸಂ. ಸ್ಪೃಹ್ = ಆಶಿಸು – ಧಾತುವಿನಿಂದ]

೭. **ತಲಬು** (ಅ) ಸಂಬಳ, ವೇತನ. ಉದಾ:— ತಿಂಗಳ ತಲಬು. ಉರ್ದು–ಅರಬಿ – ತಲಬ್]

೮. **ದಮ್ಮಸು** (ಅ) ನೆಲವನ್ನು ಕುಟ್ಟಿ ಗಟ್ಟಿ ಮತ್ತು ಮಟ್ಟ ಮಾಡುವ ಒಂದು ಸಾಧನ, ಅದನ್ನುಪಯೋಗಿಸುವುದು; ಉದಾ:— ಅಂಗಳವನ್ನು ಸರಿಯಾಗಿ ದಮ್ಮಸು ಮಾಡಬೇಕು. [ಫಾರಸಿ. ದಮಾಸ್]

೯. **ಹರತಾಳ** (ಇ) ಪೇಟೆ ಅಥವಾ ಸಂಸ್ಥೆಗಳನ್ನು ಪ್ರತಿಭಟನಾರ್ಥ ಮುಚ್ಚುವುದು; ಸಂಪು, ಮುಷ್ಕರ. ಉದಾ:— ಶಾಲೆ ಹುಡುಗರು ಹರತಾಳ ಮಾಡಿದರು. [ಹಿಂದಿ – ಹಡತಾಲ]

೧೦. **ದಮೆ** (ಅ) ಇಂದ್ರಿಯಗಳನ್ನು ಹತ್ತಿಕ್ಕುವುದು; ಇಚ್ಛೆಗಳನ್ನು ನಿಯಂತ್ರಿಸುವುದು. ಉದಾ:— ದಮೆಯಿಲ್ಲದೆ ತಪಸ್ಸಿಲ್ಲ. [ಸಂ. ದಮ = ಹತ್ತಿಕ್ಕುವಿಕೆ]

೧೧. **ಪ್ರಫುಲ್ಲ** (ಇ) ಅರಳಿದ. ಉದಾ:— ಪ್ರಫುಲ್ಲವಾದ ಮೋರೆ. [ಸಂ. ಪ್ರ = ಹೆಚ್ಚಾಗಿ, ಫುಲ್ಲ = ಅರಳಿದ್ದು]

೧೨. **ಪ್ರದೋಷ** (ಈ) ಇರುಳಿನ ಆರಂಭ ಕಾಲ; ಮುಂಗತ್ತಲು. ಉದಾ:— ಪ್ರದೋಷ ಕಾಲದಲ್ಲಿ ಪಾಠ ಸಲ್ಲದು. [ಸಂ.. ಪ್ರ = ಮೊದಲ + ದೋಷಸ್ = ಕತ್ತಲೆ]

●

### ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | | |
|---|---|---|---|
| ೬—೮ | ಸರಿಯಿದ್ದರೆ | ... | ಸಾಧಾರಣ |
| ೯–೧೦ | ,, | ... | ಉತ್ತಮ |
| ೧೧–೧೨ | ,, | ... | ಅತ್ಯುತ್ತಮ |



ಅವನಿಗೆ 3 ತಿಂಗಳಾದಾಗ, ಹಾಲು ಒಂದೇ ಸಾಕಾಗುವುದಿಲ್ಲ

# ನಿಮ್ಮ ಮಗುವಿಗೆ ಬೇಕು ಫೆರೆಕ್ಸ್

## ಮಗುವಿನ ಆದರ್ಶ ಘನ ಆಹಾರ

**3 ತಿಂಗಳು—ಘನ ಆಹಾರ ಕೊಡಲು ಸಮಯ.**

3 ತಿಂಗಳಾದಾಗ, ಮಗುವಿನ ಬೆಳೆಯುತ್ತಿರುವ ಬೇಡಿಕೆಗಳಿಗೆ ಹಾಲು ಒಂದೇ ಸಾಕಾಗುವದಿಲ್ಲ. ಮಗು ನಲಿದಾಡುತ್ತದೆ ಮತ್ತು ತ್ವರಿತಗತಿಯಿಂದ ಬೆಳೆಯುತ್ತದೆ. ಹಾಲು ಒದಗಿಸುವದಕ್ಕಿಂತ ಹೆಚ್ಚು ಕ್ಯಾಲೋರಿಗಳು ಮತ್ತು ಕಬ್ಬಿಣ ಸತ್ವ ಬೇಕಾಗುತ್ತವೆ. ನಿಮ್ಮ ಮಗುವಿಗೆ ದ್ರವರೂಪಿ ಆಹಾರ ಕಡಿಮೆಗೊಳಿಸುವಂತಹ, ಕೇಂದ್ರೀಕೃತ ರೂಪದಲ್ಲ ಹೆಚ್ಚು ಕ್ಯಾಲೋರಿ ಕೊಡುವಂತಹ ಮತ್ತು ಅಗಿದು ತಿನ್ನಲು ಕಲಿಸುವಂತಹ ಘನ ಆಹಾರದ ಅವಶ್ಯಕತೆ ಇರುತ್ತದೆ.

**ಡಾಕ್ಟರರು ಫೆರೆಕ್ಸ್ ಶಿಫಾರಸು ಮಾಡುತ್ತಾರೆ, ಏಕೆ?**

ಕ್ರಮೇಣ ಘನ ಆಹಾರವನ್ನು ಪ್ರಾರಂಭಿಸಲಿಕ್ಕಾಗಿ ವಿಶೇಷವಾಗಿ ತಯಾರಿಸಿದ ಘನ ಆಹಾರ ಫೆರೆಕ್ಸ್. ಇದರಲ್ಲಿ ಕಾರ್ಬೋಹೈಡ್ರೇಟ್ಸ್, ಫ್ಯಾಟ್ಸ್, ಕ್ಯಾಲ್ಸಿಯಮ್, ಫಾಸ್ಫರಸ್ ಹಾಗೂ ವಿಟಮಿನ್‌ಗಳಿವೆ. ಫೆರೆಕ್ಸ್‌ನಲ್ಲಿ ಮಗುವಿನ ಬೆಳವಣಿಗೆಗೆ ಅಗತ್ಯವಾದ ಕಬ್ಬಿಣ ಸತ್ವವೂ ತುಂಬಿದೆ. ಈ ಕಾರಣಗಳಿಂದ, ಮಗುವಿನ ಸರ್ವಾಂಗೀಣ ಬೆಳವಣಿಗೆಗೆ ಫೆರೆಕ್ಸ್ ಆದರ್ಶ ಘನ ಆಹಾರವಾಗಿದೆ.

**ಉಚಿತ!** ಮಗುವಿನ ಮೊದಲ ವರ್ಷದ ಕುರಿತಾದ ಪುಸ್ತಿಕೆ. ಇದರ ಪ್ರತಿಯನ್ನು ಉಚಿತವಾಗಿ ಪಡೆಯಲು, ಅಂಚೆವೆಚ್ಚಕ್ಕಾಗಿ 50 ಪೈಸೆ ಸ್ಟ್ಯಾಂಪಿನೊಂದಿಗೆ ಬರೆಯಿರಿ:

**ಪಿ. ಓ. ಬಾಕ್ಸ್ ನಂ. 19119,**
**(FAR 93 T)**
**ಬೊಂಬಾಯಿ-400 025.**




**ಡಾಕ್ಟರರು ಶಿಫಾರಸು ಮಾಡುತ್ತಾರೆ-ಫೆರೆಕ್ಸ್**
**ಮಗುವಿನ ಆದರ್ಶ ಘನ ಆಹಾರ- ಶೀಘ್ರ ಸರ್ವಾಂಗೀಣ ಬೆಳವಣಿಗೆಗಾಗಿ**

CASGLF-10-163 Kan




ತಮಿಳಿನಲ್ಲಿ: "ಆದಿ"
ಕನ್ನಡಕ್ಕೆ: ಕಲ್ಯಾಣಿ "ಮೂರ್ತಿ"
ರಾಮನಾಥಪುರ

"ನಾನು ಚೆನ್ನಾಗಿ ಹುಡುಕಿದೆ, ಟೋಕನ್ ಇಲ್ದೆ ಇದ್ರೆ ಏನು? ನಂಬರ್ ೩೮. ಅದೋ, ಆ ರೆಡ್ ಹ್ಯಾಂಡ್‌ಬ್ಯಾಗ್, ಹಿತ್ತಾಳೆ ರಿಂಗ್ ಸ್ವಲ್ಪ ಸ್ವಲ್ಪ ಸೊಟ್ಟಾಗಿದೆಯಲ್ಲಾ– ಅದೇ ನನ್ನದು, ಹ್ಯಾಂಡ್‌ಬ್ಯಾಗ್ ಮೇಲೆ ಟೋಕನ್ ನಂಬರ್ ೩೮ ಬರೆದಿದೆ ನೋಡಿ..."

ಸೀತಾಪತಿ ಮುಗುಳ್ನಕ್ಕು, "ಅದೇ...ರೂಲ್ಸ್ ಅಂದರೆ ರೂಲ್ಸ್ ಅಲ್ಲವೇ?" ಎಂದ. ಅವಳ ದುರುದುರನೆಯ ಕಣ್ಣು ಅವನನ್ನು ಎಚ್ಚರಪಡಿಸಿತು. "ಸರಿ, ನಾನು ನೋಡಿಕೊಂಡು ಬರ್ತೀನೆ. ನೀವು ಸಾಮಾನ್ಯವಾಗಿ ಕೆಮಿಸ್ಟ್ರಿ ರೋನಲ್ಲಿ ತಾನೇ ಹುಡುಕಿ ಬುಕ್ಸ್ ತೆಗೆದುಕೊಳ್ಳೋದು, ಎಂದು ಹೇಳಿ ಅವನು ಮುಂದೆ ನಡೆದ. ಜತೆಯಲ್ಲಿ ಅವಳೂ ಇಷ್ಟವಿಲ್ಲದಿದ್ದರೂ ಅವನನ್ನು ನಡೆದಳು.

ಶೆಲ್ಫಿನ ಮಧ್ಯೆ, ಒಳಗೆ, ಆ ಕಡೆ, ಈ ಕಡೆ ಪುಸ್ತಕಗಳ ಮಧ್ಯೆ, ಊಹೂಂ ಎಲ್ಲೂ ಕಾಣಲಿಲ್ಲ. ಅವಳೊಡನೆ ಬಗ್ಗಿ ಬಗ್ಗಿ ಹುಡುಕುತ್ತಿರುವಾಗ ಅವಳ ಬ್ಲ್ಯೂ ಸಾರಿ, ಹೂವಿನಂತಹ ಬೆರಳು ತಾಗುತ್ತಿದ್ದಾಗ ಅವಳು ಉಪಯೋಗಿಸುವ ಘಮ ಘಮ ಪೌಡರ್ ವಾಸನೆ ಅವನಿಗೆ ಅರಿವಾಗಲು ಒಂದೇ ದಿನ ಏಕೆ, ವರ್ಷದ ವರೆಗೂ ಹೀಗೇ ಅವಳೊಡನೆ ಹುಡುಕುತ್ತಲೇ ಇರೋಣ ಎನ್ನುತ್ತಿತ್ತು ಅವನ ಮನಸ್ಸು.

ಮತ್ತೆ ಇಬ್ಬರೂ ಅಟೆಂಡರ್ ಹತ್ತಿರ ಬಂದರು. ಸಂಜೆಯ ಹೊತ್ತಾದ್ದರಿಂದ ಬರುವವರೂ ಹೋಗುವವರೂ ಹೆಚ್ಚಾಗಿ ಗಿಜಿಗಿಜಿ ಎನ್ನುತ್ತಿತ್ತು, ಆ ಸ್ಥಳ. "ಅರ್ಜೆಂಟಾಗಿ ನಾನು ಹೋಗಬೇಕು, ಕೆಲಸವಿದೆ– ಲೈಬ್ರರಿಯನ್ ಎಲ್ಲಿದ್ದಾರೆ. ಅವರಿಗೇ ಹೇಳುತ್ತೇನೆ," ಎಂದಳು ಯಮುನ.

"ಅವರು ರಜೆ ಹಾಕಿದ್ದಾರೆ. ಈಗ ನಾನೇ ಇನ್ ಚಾರ್ಜ್," ಎಂದ ಸೀತಾಪತಿ. "ಇದೋ ನೋಡಿ ಮಿಸ್ ಯಮುನ. ನಿಮ್ಮ ಹ್ಯಾಂಡ್‌ಬ್ಯಾಗಿನಲ್ಲಿ ಏನೇನಿದೆ ಹೇಳಿ. ಚೆಕ್ ಮಾಡಿ ನೀವು ಹೇಳಿದ್ದು ಸರಿಯಾದರೆ ಬ್ಯಾಗ್ ಕೊಡುತ್ತೇನೆ."

"ಹಾಗೆಂದರೆ ನಾನು ಸುಳ್ಳು ಹೇಳ್ತಾ ಇದೀನಿಂತಲ್ವೇ ನಿಮಗನಿಸ್ತಾ ಇರೋದು," ಜಗಳಕ್ಕೆ ನಿಂತಳು.

"ಹ್ಯಾಂಡ್‌ಬ್ಯಾಗಿನಲ್ಲಿ ಏನಿದೆ ಅಂತ ಹೇಳಿಬಿಡಿ," ಆತ ಮತ್ತೆ ಹೇಳಿದ.

"ಏನೇನೋ ಇರುತ್ತೆ, ಅದನ್ಯಾಕೆ ಹೇಳಬೇಕು?"






"ಬಿ ರೀಸನೇಬಲ್ ಪ್ಲೀಸ್". ಎಂದ ಸೀತಾಪತಿ ಸಮಾಧಾನದಿಂದಲೇ ಕೈಗಡಿಯಾರ ನೋಡಿದ. "ಸರಿ ೫ ಗಂಟೆ ಸಮಯ, ೬ ಗಂಟೆಗೆ ಲೈಬ್ರರಿ ಕ್ಲೋಸ್ ಆಗಿ ಬಿಡುತ್ತೆ. ಎಲ್ಲರೂ ಹೋಗೋ ವರೆಗೂ ಕೂತಿರಿ, ಆ ಹ್ಯಾಂಡ್‌ಬ್ಯಾಗ್‌ನ್ನು ಯಾರೂ ತೆಗೆದುಕೊಳ್ಳದಿದ್ದರೆ ನಿಮಗೆ ಕೊಡುತ್ತೇನೆ."

ಪಾಪ ಏನು ಮಾಡಲೂ ತೋಚದೇ, ಅಲ್ಲಿಯೇ ಒಂದು ಕುರ್ಚಿಯ ಮೇಲೆ ಕುಸಿದಳು. ಒಂದು ಪತ್ರಿಕೆಯನ್ನು ತಲೆಕೆಳಗಾಗಿ ಇಟ್ಟುಕೊಂಡು ಹಾಳೆ ತಿರುವುತ್ತಿದ್ದಳು. ಅದನ್ನು ನೋಡಿ ಅವನಿಗೆ ತುಂಬಾ ನಗು ಬಂತು.

ಸಂಜೆ ೬–೧೦ರ ಸಮಯ. ಎಲ್ಲರೂ ಹೊರಟು ಹೋದರು– ಅಟೆಂಡರ್ ಸೇರಿ. ಟೋಕನ್ ಸಾಮಾನು ಇಡುವ ಅಲಮಾರಿನಲ್ಲಿ ಆ ಕೆಂಪು ಹ್ಯಾಂಡ್‌ಬ್ಯಾಗ್ ಇತ್ತು.

ಇನ್ನೇನು ತೆಗೆದುಕೊಳ್ಳಬಹುದಲ್ಲ? ಕೋಪದಿಂದಲೇ ಎದ್ದು ಬ್ಯಾಗ್ ತೆಗೆದುಕೊಳ್ಳಲು ಹೋದಳು.

"ಕ್ಷಮಿಸಬೇಕು. ನಾಳೆ ಯಾರೂ ಬಂದು ಏನೂ ಕೇಳಬಾರದು. ಅದರಲ್ಲಿನ ಪದಾರ್ಥಗಳನ್ನು ಒಂದು ಬಾರಿ ನಾನು ನೋಡಿ ಬಿಟ್ಟದ್ದರೆ..."

ಹ್ಯಾಂಡ್‌ಬ್ಯಾಗನ್ನು ತೆಗೆಯಲು ಹೋದಾಗ "ನೋ..." ಎಂದು ಅರಚುತ್ತಾ ಅವಳು ಬ್ಯಾಗನ್ನು ಕೀಳಲು ಹೋದಾಗ ಒಂದು ಫೋಟೋ ಕೆಳಗೆ ಬಿತ್ತು.

ಆಶ್ಚರ್ಯದಿಂದ, ಆ ಫೋಟೋ ತೆಗೆದುಕೊಂಡ. "ಇದು...ಇದನ್ನು...ನನ್ನ ಪರ್ಸ್‌ನಲ್ಲಿ ಕಾಣಲಿಲ್ಲವಲ್ಲ ಅಂತ ಹುಡುಕುತ್ತಿದ್ದೆ...ನೀವು...ನೀನು..."

ಅವಳಿಗ ಕೋಪವೂ ನಾಚಿಕೆಯೂ ಒಟ್ಟಿಗೇ ಉಂಟಾಯಿತು. "ಅವತ್ತು ನೀವು ಕೆಳಗೆ ಹಾಕಿಬಿಟ್ಟಿದ್ದಿರಿ ... ಕೊಡಬೇಕೆಂದು ಹಿಂದೇನೇ ಬಂದೆ..."

"ಆದರೆ ಮನಸ್ಸು ಬರಲಿಲ್ಲ. ನನ್ನ ಹತ್ತಿರದಲ್ಲಿ ಇರಲಿ ಅಂತ ಇಟ್ಟುಕೊಂಡ. ಬಿಟ್ಟ, ಅಲ್ಲವೆ?" ಎಂದು ಸ್ವಲ್ಪವೂ ಸಂಕೋಚವಿಲ್ಲದೆ ಹಾಗೇ ಅಪ್ಪಿಕೊಂಡ ಸೀತಾಪತಿ.

"ಇದಕ್ಕೇ ಹ್ಯಾಂಡ್‌ಬ್ಯಾಗ್ ತೋರ್ಸೋ–ದಿಲ್ಲಾಂತ ಹಠ ಹಿಡಿದೆಯಾ?"

'ಛೀ ಬಿಡಪ್ಪ!' ಎಂದು ಮುದ್ದಾಗಿ ಹೇಳುತ್ತಿದ್ದಳೆ ವಿನಾ ಬಿಡಿಸಿಕೊಳ್ಳುವುದಕ್ಕೆ ಪ್ರಯತ್ನಿಸಲೇ ಇಲ್ಲ.

●

ಪಿಟ್ಯುಟರಿ ಗ್ರಂಥಿಯು ಸ್ರವಿಸುವ ಎಚ್‌ಜಿಎಚ್ ಎಂಬ ಹಾರ್ಮೋನು ಬೆಳವಣಿಗೆಯನ್ನು ಪ್ರಚೋದಿಸುತ್ತದೆಯೆನ್ನುವುದು ತಿಳಿದು ಬಹುಕಾಲವಾದರೂ ಅದನ್ನು ಮಾನವಶವಗಳಿಂದ ಮಾತ್ರವೇ ಪಡೆಯಬಹುದಾಗಿದ್ದರಿಂದ ಅದರ ವ್ಯಾಪಕವಾದ ಬಳಕೆ ಸಾಧ್ಯವಾಗಿರಲಿಲ್ಲ. ಆದರೆ ಇತ್ತೀಚೆ ವಿಜ್ಞಾನಿಗಳು ಎಚ್ಚರಿಕಿಯಾ ಕೋಲಿ ಎಂಬ ಜೀವಾಣುವು ಈ ಹಾರ್ಮೋನನ್ನು ಹೆಚ್ಚು ಪ್ರಮಾಣದಲ್ಲಿ ಸ್ರವಿಸುವಂತೆ ಮಾಡುವುದರಲ್ಲಿ ಸಫಲರಾಗಿದ್ದಾರಲ್ಲದೆ ಇಲಿಗಳ ಮೇಲೆ ಅದನ್ನು ಪ್ರಯೋಗಿಸಿ, ಉಪಪರಿಣಾಮಗಳಿಲ್ಲದೆ ಬೆಳವಣಿಗೆಯನ್ನು ಹೆಚ್ಚಿಸಬಹುದೆಂಬುದನ್ನೂ ಕಂಡುಕೊಂಡಿದ್ದಾರೆ. ಹೀಗಾಗಿ ಕುಬ್ಜರಿಗೆ 'ಅಶ್ವತ್ಥಾಮ'ರಾಗುವ ಅವಕಾಶ ಶೀಘ್ರದಲ್ಲೇ ದೊರೆಯಬಹುದು.

# ಸಂಖ್ಯಾಲೋಕದಲ್ಲಿ ನೃತ್ಯಸಂಗೀತ

ಕೊಂಚಾಡಿ ಸೀತಾರಾಮ ಭಟ್ಟ

ಬಾನಿನಲ್ಲಿರುವ ಅಸಂಖ್ಯ ಚುಕ್ಕಿಗಳಲ್ಲಿ ಕೆಲವು ಅಪೂರ್ವ ಶೋಭೆಯಿಂದ ಮಿನುಗುತ್ತಿದ್ದು, ತಮ್ಮೆಡೆ ಜನಮನವನ್ನು ಸೆಳೆದು ಸೂರೆಗೊಳ್ಳುವಂತೆ, ತಾಳಮೇಳಗಳಿಂದ ಸಂಗೀತದ ಮಾಧುರ್ಯ ಮುಪ್ಪರಿಗೊಳ್ಳುವಂತೆ ನರ್ತಿಸುವ ಅಂಕೆಗಳ ಸಹಜ ಸಮಾವೇಶ, ಅಪೂರ್ವ ಸಂಯೋಜನೆ ಚಿತ್ತರಂಜನಕಾರಿ. ಹಲವೆಡೆ ಚಿತ್ರ ಕಲೆಯ ಕಲಾಕೃತಿಗಳ ಸಮಮಿತಿಯೂ ಇಲ್ಲಿ ದೃಷ್ಟಿಗೋಚರವಾಗುತ್ತದೆ. ಸಮುದ್ರದಲೆಗಳ ಉಬ್ಬರಿಳಿತಗಳೂ ಇಲ್ಲಿ ಇಲ್ಲದಿಲ್ಲ. ಹಲವು ಸೌಂದರ್ಯಾತ್ಮಕ ಸಂಖ್ಯೆಗಳ ಸೊಬಗು ಇಂತಹ ಸಂಖ್ಯಾಯುಗ್ಮಗಳ ಗುಣಲಬ್ಧದಲ್ಲೂ ಕಾಣಬರುತ್ತದೆ.

ಸಂಗೀತಶಾಸ್ತ್ರದ ಸ್ವರಗಳ ಆರೋಹಣ ಮತ್ತು ಅವರೋಹಣಗಳನ್ನು ಜೊತೆಗೂಡಿಸಿದರೆ 'ಸ ರಿ ಗ ಮ ಪ ಧ ನಿ ಸ ಸ ನಿ ಧ ಪ ಮ ಗ ರಿ ಸ' ಸ್ವರ ಸಂಯೋಜನೆ ಸಿಗುತ್ತದೆ. ಸಾಂಕೇತಿಕವಾಗಿ ಮಧ್ಯಸ್ಥಾಯಿಯ ಸಪ್ತಸ್ವರಗಳನ್ನು ೧ ರಿಂದ ೭ರ ವರೆಗಿನ ಅಂಕೆಗಳಿಂದಲೂ ತಾರಸ್ಥಾಯಿಯ ಮೊದಲ ಸ್ವರವನ್ನು ೮ ಈ ಅಂಕೆಯಿಂದಲೂ ನಿರೂಪಿಸಿದರೆ, ಸ್ವರಗಳ ಆರೋಹಣ ಮತ್ತು ಅವರೋಹಣಗಳು ೧ ೨ ೩ ೪ ೫ ೬ ೭ ೮– ೮ ೭ ೬ ೫ ೪ ೩ ೨ ೧ ಎಂದು ರೂಪುಗೊಳ್ಳುತ್ತವೆ. ಈ ಕೆಳಗಿನ ಸಂಖ್ಯಾಯುಗ್ಮಗಳ ಗುಣಲಬ್ಧವು ೧ ೨ ೩ ೪ ೫ ೬ ೭ ೮–೮ ೭ ೬ ೫ ೪ ೩ ೨ ೧.

(೧) ೩ ೩ ೬ ೩ ೬ ೩ ೬ ೩ ೩ × ೩ ೬ ೭ ೦ ೩ ೩ ೭ = ೧ ೨ ೩ ೪ ೫ ೬ ೭ ೮ ೮ ೭ ೬ ೫ ೪ ೩ ೨ ೧.

(೨) ೩ ೬ ೬ ೩ ೩ ೬ ೬ ೩ × ೩ ೩ ೭ ೦ ೦ ೩ ೬ ೭ = ೧ ೨ ೩ ೪ ೫ ೬ ೭ ೮ ೮ ೭ ೬ ೫ ೪ ೩ ೨ ೧.

(೩) ೩ ೬ ೯ ೯ ೬ ೩ × ೩ ೩ ೩ ೭ ೦ ೦ ೩ ೬ ೬ ೭ = ೧ ೨ ೩ ೪ ೫ ೬ ೭ ೮ ೮ ೭ ೬ ೫ ೪ ೩ ೨ ೧.

(೪) ೩ ೩ ೬ ೩ ೩ × ೧ ೩ ೭ ೧ ೩ ೭ ೧ ೩ ೭ = ೧ ೨ ೩ ೪ ೫ ೬ ೭ ೮ ೮ ೭ ೬ ೫ ೪ ೩ ೨ ೧.

ಮೊದಲನೇ ಗುಣ್ಯ ಗುಣಕಗಳನ್ನು ಸಪ್ತಸ್ವರಗಳಲ್ಲಿ ನಿರೂಪಿಸಿದರೆ ಗ ಗ ಧ ಗ ಧ ಗ ಧ ಗ ಗ ಮತ್ತು ಗ ಧ ನೀ ಗ ಗ ನೀ ಎಂಬ ಸ್ವರಗಳ ಮೇಳದ ಮಾಧುರ್ಯ ಹಾರ್ಮೋನಿಯಂ ಇಲ್ಲವೆ ಇನ್ನಾವುದಾದರೂ ತಂತಿ ವಾದ್ಯದ ಮೂಲಕ ವ್ಯಕ್ತವಾಗುತ್ತದೆ. ಇದೇ ರೀತಿಯಲ್ಲಿ ಇನ್ನುಳಿದ ಗುಣ್ಯ ಗುಣಕಗಳನ್ನು ನಾವು ಸಂಗೀತಾತ್ಮಕ ದೃಷ್ಟಿಯಿಂದ ನೋಡಬಹುದು.

ಈ ಮೇಲಿನ ಪ್ರತಿಯೊಂದು ಗುಣ್ಯದಲ್ಲೂ ಸಮಮಿತಿ(symmetry)ಯಿದೆ. ಇವುಗಳಲ್ಲಿ ಒಂದನೇ, ಎರಡನೇ ಮತ್ತು ನಾಲ್ಕನೇ ಗುಣ್ಯಗಳಲ್ಲಿ ೩ ಮತ್ತು ೬ರ ತಾಳಬದ್ಧ ಮೇಳವಿದೆ. ಈ ಅಂಕೆಗಳನ್ನು ಕಂಡಾಗ, ಅಂಕೆಗಳು ಕಣ್ಣು ಮುಂದೆ ಕುಣಿದಾಡಿದಂತೆ ಕಾಣುವುದು ಮೂರನೇ ಗುಣ್ಯದಲ್ಲಿ ಇವುಗಳಂತೆ ೩ ೬ ಮತ್ತು ೯ ಈ ಅಂಕೆಗಳ ಸ್ವಾರಸ್ಯಕರ ಸಂಯೋಜನೆ. ಇನ್ನು ಇವು ಗುಣಕಗಳತ್ತ ದೃಷ್ಟಿ ಹಾಯಿಸಿದಾಗ ಅಲ್ಲೂ ಒಂದು ವೈಶಿಷ್ಟ್ಯವಿದೆ. ಒಂದನೇ ಗುಣಕ ೩ ೬ ೭ ೦ ೩ ೩ ೭.

ಇದರ ಮೊದಲನೇ ಮೂರು ಅಂಕೆಗಳನ್ನೂ ಕೊನೆಯ ಮೂರು ಅಂಕೆಗಳನ್ನೂ ಅದಲು ಬದಲು ಮಾಡಿ ಮಧ್ಯದಲ್ಲಿ ಒಂದು ಸೊನ್ನೆ ಹೆಚ್ಚಿಸಿದರೆ ಎರಡನೇ ಗುಣಕ ೩ ೩ ೭ ೦ ೦ ೩ ೬ ೭ ಲಭಿಸುತ್ತದೆ. ಎರಡನೇ ಮತ್ತು ಮೂರನೇ ಗುಣಕಗಳನ್ನೂ ಹೋಲಿಸಿ ನೋಡಿ, ಎರಡನೇ ಗುಣಕದ ಮೊದಲನೇ ಮೂರು ಅಂಕೆಗಳ ೩ ಮತ್ತು ೭ರ ಮಧ್ಯದಲ್ಲಿರುವ ೩ರ ಬದಲಾಗಿ ೩೩ ಬರೆದು, ಗುಣಕದ ಕೊನೆಯ ಮೂರು ಅಂಕೆಗಳ ೩ ಮತ್ತು ೭ರ ಮಧ್ಯದಲ್ಲಿರುವ ೬ರ ಬದಲಾಗಿ ೬೬ ಬರೆದು ಒಟ್ಟು ಎರಡು ಸ್ಥಾನಗಳನ್ನು ಹೆಚ್ಚಿಸಿಕೊಂಡರೆ ಮೂರನೇ ಗುಣಕವು (೩ ೩ ೩ ೭ ೦ ೦ ೦ ೩ ೬ ೬ ೭) ದೊರೆಯುತ್ತದೆ. ನಾಲ್ಕನೇ ಗುಣಕ ೧ ೩ ೭ ೧ ೩ ೭ ೧ ೩ ೭ ರಲ್ಲಿ ೧, ೩ ಮತ್ತು ೭ ಮೂರು ಬಾರಿ ಆವೃತ್ತಿ ಇದೆ. ೧, ೩ ಮತ್ತು ೭ ಒಂದು ವೃತ್ತದಲ್ಲಿ ಮೂರು ಬಾರಿ ನರ್ತಿಸುವಂತೆ ನನಗನಿಸುತ್ತದೆ.

ಪುನರಾವರ್ತಿಯಿಲ್ಲ. ಅಂಕೆಗಳಾದ ೨ ಮತ್ತು ೭ ಇಲ್ಲಿಲ್ಲ.

ಇದೇ ರೀತಿಯ ಇನ್ನೊಂದು ಗುಣಲಬ್ಧ ೧೧೨೨೨೨೧೧ (ಸಂಗೀತಾತ್ಮಕವಾಗಿ ಇದನ್ನು ಸ ಸ ರಿ ರಿ ರಿ ರಿ ಸ ಸ ಎಂದು ನಿರೂಪಿಸಬಹುದು). ಇವುಗಳ ಗುಣ್ಯ ಗುಣಕಗಳ ಅಂದ ನೋಡಿ:

(೧) ೧೦೨೦೨೦೧ × ೧೧ = ೧೧೨೨೨೨೧೧

(೨) ೧೦೧೧೦೧ × ೧೧೧ = ೧೧೨೨೨೨೧೧

(೩) ೧೦೧೦೧ × ೧೧೧೧ = ೧೧೨೨೨೨೧೧

(೪) ೧೦೧ × ೧೧೧೧೧೧ = ೧೧೨೨೨೨೧೧

ಈ ಮೇಲಿನ ಸಂಖ್ಯಾಯುಗ್ಮಗಳ ಬಗ್ಗೆ ಒಂದು ಮಾತು. ಅವುಗಳಲ್ಲಿ ಪ್ರತಿಯೊಂದರ ಗುಣ್ಯ ಗುಣಕಗಳಲ್ಲಿರುವ ಒಟ್ಟು ಸ್ಥಾನಗಳು ೯ ಮತ್ತು ಪ್ರತಿಯೊಂದರ ಅಂಕೆಗಳ ಮೊತ್ತದ ಗುಣಲಬ್ಧ ೧೨.

೩ ೬ ೭ ೦ ೩ ೩ ೭ (ಮೊದಲನೇ ಗುಣಕ) ೩ ೬ ೭ ೦ ೩ ೩ ೭.

೩ ೩ ೭ ೦ ೦ ೩ ೬ ೭ (ಎರಡನೇ ಗುಣಕ) ೩ ೩ ೭ ೦ ೦ ೩ ೬ ೭

೩ ೩ ೩ ೭ ೦ ೦ ೩ ೬ ೬ (ಮೂರನೇ ಗುಣಕ) ೩ ೩ ೩ ೭ ೦ ೦ ೦ ೩ ೬ ೬ ೭.

ಸಮಮಿತಿಯುಳ್ಳ ಇನ್ನೊಂದು ಸಂಖ್ಯಾಯುಗ್ಮದಿಂದಲೂ ಮೇಲಿನ ಗುಣಲಬ್ಧವನ್ನು ಪಡೆಯಬಹುದು.

೧ ೨ ೩ ೪ ೪ ೪ ೪ ೪ ೪ ೩ ೨ ೧ × ೧ ೦ ೦ ೦ ೦ ೧
= ೧ ೨ ೩ ೪ ೫ ೬ ೭ ೮ ೮ ೭ ೬ ೫ ೪ ೩ ೨ ೧.

ಮತ್ತೊಂದು ಸಂಖ್ಯಾಯುಗ್ಮವನ್ನು ಗಮನಿಸಿ,

೨ ೪ ೩ ೫ ೭ ೬ ೯ ೧ × ೫ ೦ ೬ ೮ ೪ ೯ ೩ ೧
= ೧ ೨ ೩ ೪ ೫ ೬ ೭ ೮ ೮ ೭ ೬ ೫ ೪ ೩ ೨ ೧.

ಇದರಲ್ಲಿರುವ ಗುಣ್ಯದಲ್ಲಿ ಯಾವ ಅಂಕೆಯೂ ಎರಡಾವರ್ತಿ ಬಂದಿಲ್ಲ. ಇದರಲ್ಲಿನ ಅಂಕೆಗಳು

| ಸಂಖ್ಯಾಯುಗ್ಮದ ಕ್ರಮಾಂಕ | ಸ್ಥಾನಗಳು: ಗುಣ್ಯ | ಗುಣಕ | ಮೊತ್ತ | ಅಂಕೆಗಳ ಮೊತ್ತ: ಗುಣ್ಯ | ಗುಣಕ | ಮೊತ್ತಗಳ ಗುಣಲಬ್ಧ |
|---|---|---|---|---|---|---|
| (೧) | ೭ | ೨ | ೯ | ೬ | ೨ | ೧೨ |
| (೨) | ೬ | ೩ | ೯ | ೪ | ೩ | ೧೨ |
| (೩) | ೫ | ೪ | ೯ | ೩ | ೪ | ೧೨ |

ಸಂಗೀತದ ಇನ್ನೊಂದು ಸ್ವರ ಸಂಯೋಜನೆ 'ಸ ಸ ರಿ ರಿ ಗ ಗ ಗ ಗ ರಿ ರಿ ಸ ಸ.' ಅಂಕೆಗಳಲ್ಲಿ ಇದನ್ನು ೧೧೨೨೩೩೩೩೨೨೧೧ ಎಂದು ಬರೆಯಬಹುದು. ಈ ಕೆಳಗಿನ ಸಂಖ್ಯಾಯುಗ್ಮಗಳಿಂದ ಈ ಗುಣಲಬ್ಧವನ್ನು ಪಡೆಯಬಹುದು.

(೧) ೧೦೨೦೩೦೩೦೨೦೧ × ೧೧ = ೧೧೨೨೩೩೩೩೨೨೧೧

(೨) ೧೧೧೧೨೨೧೧೧೧ × ೧೦೧ = ೧೧೨೨೩೩೩೩೨೨೧೧

(೩) ೧೦೧೧೧೧೧೧೦೧ × ೧೧೧ = ೧೧೨೨೩೩೩೩೨೨೧೧

(೪) ೧೦೧೦೨೦೧೦೧ × ೧೧೧೧ = ೧೧೨೨೩೩೩೩೨೨೧೧

(೫) ೧೧೨೨೨೨೧೧ × ೧೦೦೦೧ = ೧೧೨೨೩೩೩೩೨೨೧೧

(೬) ೧೦೨೦೨೦೧ × ೧೧೦೦೧೧ = ೧೧೨೨೩೩೩೩೨೨೧೧

ಇಲ್ಲಿರುವ ಗುಣ್ಯಗಳನ್ನು ಅನುಕ್ರಮವಾಗಿ 'ಸಾರೀಗಾಗಾರೀಸ,' 'ಸಸಸಸರಿರಿಸಸಸಸ,' 'ಸಾಸ-ಸಸಸಸಸಾಸ,' 'ಸಾಸಾರೀಸಾಸ,' 'ಸಸರಿರಿರಿರಿಸಸ' ಮತ್ತು 'ಸಾರೀರೀಸ'ವೆಂದು ಸಂಗೀತಾತ್ಮಕವಾಗಿ ಬರೆಯಬಹುದು (ಇಲ್ಲಿ ಸೊನ್ನೆಯನ್ನು ಹಿಂದಿನ ಅಕ್ಷರಕ್ಕೆ ಸೇರುವ ದೀರ್ಘವೆಂದು ಪರಿಗಣಿಸಲಾಗಿದೆ). ಸೊನ್ನೆಯನ್ನು ಮಂದ್ರಸ್ಥಾಯಿಯ 'ನಿ' ಎಂದು ಪರಿಗಣಿಸಿದರೆ ಮೊದಲನೇ ಗುಣ್ಯ 'ಸನಿರಿನಿಗನಿಗನಿರಿನಿಸ,' ಎಂದೂ ಇದೇ ರೀತಿಯಲ್ಲಿ ಮೂರನೇ ನಾಲ್ಕನೇ ಮತ್ತು ೬ನೇ ಗುಣ್ಯಗಳಲ್ಲೂ ಬದಲಾವಣೆಯಾಗುತ್ತದೆ. ಇದೇ ರೀತಿ ಗುಣಕಗಳನ್ನೂ ಸಂಗೀತಾತ್ಮಕವಾಗಿ ನಿರೂಪಿಸಬಹುದು. ಮೇಲಿನ ಎಲ್ಲಾ ಸಂಖ್ಯಾಯುಗ್ಮಗಳಲ್ಲಿ ೦,೧,೨,೩ರ ನರ್ತನವಿದೆ.

೮೫೪೭೮೫೪೭ × ೧೩೧೩ = ೧೧೨೨೩೩೩೩೨೨೧೧

ಎಂಬುದೂ ಗಮನಾರ್ಹವಾದ ಸಂಗತಿ. ಈ

ಪುನರಾವೃತ್ತಿಯಾಗಿದೆ.

ಹತ್ತು ಸ್ಥಾನಗಳಿರುವ ಈ ಸಂಖ್ಯೆಯನ್ನು ನೋಡಿ, ೧೨೨೨೨೨೨೨೨೧ ಈ ಸಂಖ್ಯೆಯ ಆದಿ ಮತ್ತು ಅಂತ್ಯಗಳಲ್ಲಿ ಅಂಕೆ '೧' ಇದೆ. ಮಧ್ಯದಲ್ಲಿ ಎಂಟು '೨'ಗಳಿವೆ. ಈ ಕೆಳಗಿನ ಸಂಖ್ಯಾಯುಗ್ಮಗಳ ಗುಣಲಬ್ಧವೂ ೧೨೨೨೨೨೨೨೨೧.

(೧) ೪೦೭೪೦೭೪೦೭ × ೩ = ೧೨೨೨೨೨೨೨೨೧

(೨) ೩೭೦೩೭೦೩೭ × ೩೩ = ೧೨೨೨೨೨೨೨೨೧

(೩) ೩೬೭೦೩೩೭ × ೩೩೩ = ೧೨೨೨೨೨೨೨೨೧

(೪) ೩೩೩೬೬೭ × ೩೬೬೩ = ೧೨೨೨೨೨೨೨೨೧

ಹಾಗೆಯೇ,

(೫) ೩೦೦೩೦೦೩ × ೪೦೭ = ೧೨೨೨೨೨೨೨೨೧.

ಮೇಲಿರುವ ಪ್ರತಿಯೊಂದು ಗುಣ್ಯದಲ್ಲಿ ಮೂರು ಅಥವಾ ನಾಲ್ಕು ಸಂಖ್ಯೆಗಳ ಸುಂದರ ಸಂಯೋಜನೆ ಇದೆ. ಮೊದಲ ಮೂರು ಗುಣಕಗಳಲ್ಲಿ ಅಂಕೆ ಮೂರಲ್ಲದೆ ಬೇರಿಲ್ಲ. ನಾಲ್ಕನೇ ಗುಣಕದಲ್ಲಿ ೩ ಮತ್ತು ೬ರ ಏರಿಳಿತ.

ಇದೇ ಗುಣಲಬ್ಧವನ್ನು ಈ ರೀತಿಯಾಗಿಯೂ ಪಡೆಯಬಹುದು.

(೧) ೧೧೧೧೧೧೧೧೧ × ೧೧ = ೧೨೨೨೨೨೨೨೨೧

(೨) ೧೧೦೧೧೦೧೧ × ೧೧೧ = ೧೨೨೨೨೨೨೨೨೧

(೩) ೧೦೦೧೦೦೧ × ೧೨೨೧ = ೧೨೨೨೨೨೨೨೨೧

ಇವುಗಳ ಗುಣ್ಯದಲ್ಲಿ ಒಂದರ [illegible] ಮತ್ತು ಸೊನ್ನೆಗಳ ಅಪೂರ್ವ ಆಕರ್ಷಣೆ. ಮೊದಲನೆಯ ಎರಡು ಗುಣಕಗಳಲ್ಲಿ ೧ ರ

ಸಾಲು. ಮೂರನೇ ಗುಣಕಗಳಲ್ಲಿ ೧ ಮತ್ತು ೨ ರಿಂದೊಳಗೊಂಡ ಸಮಮಿತಿಯಿದೆ.

ಕುತೂಹಲಕಾರಿಯಾದ ಇನ್ನೊಂದು ಸಂಖ್ಯಾ ಯುಗ್ಮ ನೋಡಿ.

೧೨೩೪೫೬೭೯ × ೯೯. ಇದರ ಗುಣಲಬ್ಧವೂ ೧೨೨೨೨೨೨೨೨೧. ಇದರ ಗುಣ್ಯದಲ್ಲಿ ೦ ಮತ್ತು ೮ ರ ಹೊರತು ಎಲ್ಲಾ ಅಂಕೆಗಳೂ ಏರಿಕೆಯ ಕ್ರಮದಲ್ಲಿ ಒಮ್ಮೊಮ್ಮೆ ಮಾತ್ರ ಇವೆ. ಗುಣಕವೂ ಒಂಬತ್ತರ ಜೋಡಿ.

೩, ೨ ಮತ್ತು ೦ ಗಳಿಂದೊಳಗೊಂಡ ಕೆಲವು ಸಂಖ್ಯಾಯುಗ್ಮಗಳತ್ತ ಗಮನ ಹರಿಸಿ.

(೧) ೩೩೩೩೩೩೩೩ × ೨ = ೬೬೬೬೬೬೬೬

(೨) ೩೦೩೦೩೦೩ × ೨೨ = ೬೬೬೬೬೬೬೬

(೩) ೩೩೦೦೩೩ × ೨೦೨ = ೬೬೬೬೬೬೬೬

(೪) ೩೦೦೦೩ × ೨೨೨೨ = ೬೬೬೬೬೬೬೬

(೫) ೩೩೩೩ × ೨೦೦೦೨ = ೬೬೬೬೬೬೬೬

(೬) ೩೦೩ × ೨೨೦೦೨೨ = ೬೬೬೬೬೬೬೬

(೭) ೩೩ × ೨೦೨೦೨೦೨ = ೬೬೬೬೬೬೬೬

(೮) ೩ × ೨೨೨೨೨೨೨೨ = ೬೬೬೬೬೬೬೬

ಈ ಮೇಲಿನ ಎಂಟು ಸಂಖ್ಯಾಯುಗ್ಮಗಳಲ್ಲಿ ಪ್ರತಿಯೊಂದರ ಗುಣಲಬ್ಧವೂ ೬೬೬೬೬೬೬೬ (ಗುಣಲಬ್ಧದಲ್ಲಿ ಎಂಟು ಆರುಗಳಿವೆ). ಇವುಗಳಲ್ಲಿ ೧ ನೇ, ೫ನೇ, ೭ನೇ ಮತ್ತು ೮ ನೇ ಗುಣ್ಯಗಳಲ್ಲಿ ಅಂಕೆ ‘೩’ ಮಾತ್ರ ಇದೆ. ೨ನೇ, ೩ ನೇ, ೪ನೇ ಮತ್ತು ೬ನೇ ಗುಣ್ಯಗಳಲ್ಲಿ ‘೩’ ಮತ್ತು ‘೦’ ಗಳ ಶಿಸ್ತುಬದ್ಧ ಸಂಯೋಜನೆ. ಇದೇ ರೀತಿಯ ಗುಣಧರ್ಮಗಳು ಗುಣಕಗಳಲ್ಲೂ ಕಾಣಸಿಗುತ್ತವೆ. ಮಾತ್ರವಲ್ಲದೆ ಪ್ರತಿಯೊಂದು ಸಂಖ್ಯಾ ಯುಗ್ಮದ ಗುಣ್ಯದಲ್ಲಿರುವ ಒಟ್ಟು ‘೨’ ಗಳ ಗುಣಲಬ್ಧ ‘೮’ ಹಾಗೂ ಗುಣ್ಯದಲ್ಲಿರುವ ಸ್ಥಾನಗಳ ಸಂಖ್ಯೆ ಮತ್ತು ಗುಣಕದಲ್ಲಿರುವ ಸ್ಥಾನಗಳ ಸಂಖ್ಯೆ ಇವುಗಳ ಮೊತ್ತ ಒಂಭತ್ತು.

| ಸಂಖ್ಯಾಯುಗ್ಮ ಕ್ರಮಾಂಕ | ಗುಣ್ಯದಲ್ಲಿರುವ ಮೂರುಗಳು | ಗುಣಕದಲ್ಲಿರುವ ಎರಡುಗಳು | ಗುಣಲಬ್ಧ | ಸೊನ್ನೆಗಳು | | | ಸ್ಥಾನಗಳು | | |
|---|---|---|---|---|---|---|---|---|---|
| | | | | ಗುಣ್ಯ | ಗುಣಕ | ಒಟ್ಟು | ಗುಣ್ಯ | ಗುಣಕ | ಒಟ್ಟು |
| ೧ | ೮ | ೧ | ೮ | – | – | – | ೮ | ೧ | ೯ |
| ೨ | ೪ | ೨ | ೮ | ೩ | – | ೩ | ೭ | ೨ | ೯ |
| ೩ | ೪ | ೨ | ೮ | ೨ | ೧ | ೩ | ೬ | ೩ | ೯ |
| ೪ | ೨ | ೪ | ೮ | ೩ | – | ೩ | ೫ | ೪ | ೯ |
| ೫ | ೪ | ೨ | ೮ | – | ೩ | ೩ | ೪ | ೫ | ೯ |
| ೬ | ೨ | ೪ | ೮ | ೧ | ೨ | ೩ | ೩ | ೬ | ೯ |
| ೭ | ೨ | ೪ | ೮ | – | ೩ | ೩ | ೨ | ೭ | ೯ |
| ೮ | ೧ | ೮ | ೮ | – | – | – | ೧ | ೮ | ೯ |

ಕಡಲಿನಡಿಯಲ್ಲಿರುವ ಮುತ್ತು ರತ್ನಗಳು ಅನೇಕ, ಅಗಣಿತ. ಒಮ್ಮೊಮ್ಮೆ ವಿಫಲನಾದರೂ, ಎಡಬಿಡದೆ ಕಡಲಿನಲ್ಲಿ ಮುಳುಗುಹಾಕಿ ಸಮುದ್ರ ತಳವನ್ನು ತಲಪಿದರೆ ಅವು ನಿಸ್ಸಂದೇಹವಾಗಿ ಲಭಿಸುವುವು. ಭೋರ್ಗರೆವ ಕಡಲಿನ ತೆರೆಗಳಿಗೆ ಬೆದರಿ ಉಸಿರು ಕಟ್ಟುವುದೆಂಬ ಭಯದಿಂದ ನೀರಿನಲ್ಲಿ ಮುಳುಗು ಹಾಕದೆ ಕಡಲ ತೀರದಿಂದಲೇ ಮುತ್ತು ರತ್ನಗಳನ್ನು ಕರೆದರೆ ಅವು ಹೇಗೆ ಬಂದಾವು? ಅವಿರತ ಪ್ರಯತ್ನದಿಂದ ಮಾತ್ರ ಅವು ಲಭ್ಯ. ಸಂಖ್ಯಾಸಮುದ್ರದಲ್ಲಿ ಸತತ ಮುಳುಗುಹಾಕಿ ಲಭಿಸಿದ ಹಲವು ಸಂಖ್ಯಾರತ್ನಗಳಲ್ಲಿ ಕೆಲವನ್ನು ಆರಿಸಿ, ನಿರ್ಮಿಸಿದ ಹಾರವೊಂದನ್ನು ಸಂಖ್ಯಾಪ್ರಿಯರಿಗೆ ಸಮರ್ಪಿಸಲಾಗಿದೆ. ಇದರಿಂದ ಪ್ರೇರಣೆ ಪಡೆದು ಹೃದಯಗಳು ಸಂಖ್ಯೆಗಳ ಸೊಬಗನ್ನು ಸವಿದು ಸಂತಸದಿಂದ ಸಂಖ್ಯಾಸಮುದ್ರದಲ್ಲಿ ಸತತ ಮುಳುಗು ಹಾಕಿ ಲಭಿಸಿದ ಸಂಖ್ಯಾರತ್ನಗಳನ್ನು ವಾಗ್ದೇವಿಗೆ ಸಮರ್ಪಿಸಿದರೆ ನನ್ನ ಈ ಪ್ರಯತ್ನ ಸಾರ್ಥಕ. ●



ಪಂಡಿತ ನೆಹರೂ ಪ್ರಧಾನಿ; ಸರದಾರ ಪಟೇಲರು ಉಪ ಪ್ರಧಾನಿ. ರಾಷ್ಟ್ರಪತಿ ಹುದ್ದೆಗಾಗಿ ಒಬ್ಬ ವ್ಯಕ್ತಿ ಬೇಕಾಗಿದ್ದರು. ಆ ವ್ಯಕ್ತಿ ಯಾರಾಗಬಹುದು, ಇಡೀ ದೇಶ ಕಾತರದಿಂದ ಕಾಯುತ್ತಿತ್ತು. ನೆಹರೂ ರಾಜಾಜಿಯ ಹೆಸರನ್ನು ಸೂಚಿಸಿದರೆ ಪಟೇಲರು ರಾಜೇಂದ್ರ ಪ್ರಸಾದರನ್ನು ಇಚ್ಛಿಸಿದ್ದರು. ರಾಜಾಜಿ ಮತ್ತು ಪ್ರಸಾದ ಇವರಿಬ್ಬರೂ ಪ್ರಸಿದ್ಧ ಮುಂದಾಳುಗಳು; ದೇಶಕ್ಕಾಗಿ ಅಪಾರ ತ್ಯಾಗ ಮಾಡಿದವರು. ಇವರಿಬ್ಬರಲ್ಲಿ ಗಣರಾಜ್ಯದ ಅಧ್ಯಕ್ಷ ಯಾರಾಗಬೇಕು ? ಜಟಿಲವಾದ ಸಮಸ್ಯೆಯಾಯಿತು.

ರಾಜಾಜಿ ಚತುರ ರಾಜಕಾರಣಿ. ಅವರನ್ನು ಚಾಣಕ್ಯ ಇಲ್ಲವೇ ಮೆಕಿಯಾವಿಲ್ಲಿ ಅವರಿಗೆ ಹೋಲಿಸಬಹುದು. ಜಗತ್ತನ್ನು ವಾಸ್ತವಿಕ ದೃಷ್ಟಿಕೋನದ ಕನ್ನಡಕದಿಂದ ನೋಡಿ ಇದ್ದುದನ್ನು ಇದ್ದಂತೆಯೇ ಖಂಡತುಂಡವಾಗಿ ಹೇಳುವವರು. ಪ್ರಥಮ ಭಾರತೀಯ ಗವರ್ನರ್ ಜನರಲ್ಲರೆಂದು ಕೆಲಸ ಮಾಡಿ ಆಡಳಿತದಲ್ಲಿ ಅಪಾರ ಅನುಭವ ಪಡೆದವರು. ಉತ್ತಮ ಸಂಧಾನಕಾರರು. ವಿರೋಧಿಗಳನ್ನು ಮಣ್ಣು ಮುಕ್ಕಿಸುವವರು. ಗಾಂಧೀಜಿಯ ಸಮೀಪದ ಸಂಬಂಧಿಕರಲ್ಲದೆ ಆತ್ಮೀಯರೂ ಹೌದು. ಪ್ರಸಂಗಬಂದಲ್ಲಿ ಅಂಥವರನ್ನೇ ಟೀಕಿಸಲು ಹಿಂದೆ ಮುಂದೆ ನೋಡದವರು.

ರಾಜೇಂದ್ರ ಬಾಬುಗಳು ಅಜಾತ ಶತ್ರು. ಧಾರ್ಮಿಕ ಪ್ರವೃತ್ತಿಯ ಸಾದಾ ಮನುಷ್ಯ. ಸರಳ ಜೀವನ. ಮಾತುಕತೆಗಳಲ್ಲಿ ನಾಟಕೀಯತೆ, ಡಾಂಭಿಕತನದ ಲವಲೇಶವೂ ಇಲ್ಲ. ಬಡತನ ಏನೆಂಬುದು ಗೊತ್ತಿದ್ದವರು. ಇಂಗ್ಲಂಡಕ್ಕೆ ಮುಂದಿನ ಶಿಕ್ಷಣದ ಸಲುವಾಗಿ ಹೋಗಲು ಸ್ಕಾಲರ್‌ಶಿಪ್ಪು ದೊರಕಿದರೂ ದೇಶಪ್ರೇಮದ ಸಲುವಾಗಿ ಅದನ್ನು ನಿರಾಕರಿಸಿದವರು. ಬಿಹಾರದಲ್ಲಿ ಭೂಕಂಪವಾಗಿದ್ದಾಗ ಅವರು ಸಲ್ಲಿಸಿದ ಸೇವೆ ಅದ್ಭುತವಾದುದು. ೧೯೪೬ರ ನೆಹರೂ [illegible] ಸಂಪುಟದಲ್ಲಿ ಮಂತ್ರಿಗಳೆಂದು [illegible] ಅನುಭವ ಮತ್ತು ಘಟನಾ ಸಮಿತಿಯ ಅಧ್ಯಕ್ಷರೆಂದು [illegible] ಜಾರ್ಜ್ ವಾಶಿಂಗ್ಟನ್ [illegible].

ಸ್ವರ್ಗೀಯ [illegible] ನೆಹರೂ. ಅವರು ಪ್ರಸಾದರ [illegible]. ಆ

## ಅದಕ್ಕಾಗಿ ಅವರಿಗೆ
## ರಾಷ್ಟ್ರಪತಿಯಾಗುವ ಅವಕಾಶ ಸಿಗಲಿಲ್ಲ

# ರಾಜಾಜಿಯ 'ರಾಜಕೀಯ ಅಪರಾಧ'

ಎಂ. ಡಿ. ರಾಣೆ

ವಿಭಜನೆಯನ್ನು ಒಪ್ಪಬೇಕಾಯಿತು!

ಚಾಣಾಕ್ಷರಾದ ರಾಜಾಜಿ ಅದನ್ನು ಮೊದಲೆ ಊಹಿಸಿದ್ದರು, ಆ ಪ್ರಕಾರ ನುಡಿದೂ ಬಿಟ್ಟರು. ಕಾಂಗ್ರೆಸ್ ಪಕ್ಷದ ಪ್ರಕಾರ ಅದು ಅವರು ಮಾಡಿದ ಘೋರ ಅಪರಾಧವಾಗಿತ್ತು. ಸತ್ಯವನ್ನು ಘಟನೆಯನ್ನು ಒಪ್ಪಿಕೊಳ್ಳಲು ಪ್ರಕಟಿಸಲು ಧೈರ್ಯ ಬೇಕು. ಪ್ರತಿಯೊಬ್ಬರೂ ದೇಶದ ವಿಭಜನೆಯಾಗುವದೆಂದು ಮನಗೊಂಡಿದ್ದರು. ಆದರೆ ಯಾಕೆ ಬಾಯಿ ಬಿಟ್ಟು ಹೇಳಿ ಕೋಪಕ್ಕೆ ಗುರಿಯಾಗಬೇಕೆಂದು ಸುಮ್ಮನಿದ್ದರು. ಈ ಮಾತು ಕ್ರಿಶ್ಚಿಯನ್ ಆಂಡರ್‌ಸನ್ನರು ಬರೆದ 'The Emperor's New Clothes' ಎನ್ನುವ ಕಥೆಯನ್ನು ನೆನಪಿಗೆ ತರುತ್ತದೆ. ಅರಸನ ಮೈ ಮೇಲೆ ಬಟ್ಟೆಗಳಿಲ್ಲ. ಆತನು ನಗ್ನ, ಆದರೆ ಯಾರೂ ತನ್ನನ್ನು ಅವಿವೇಕಿಯೆಂದು ಎಂದು ಕರೆಯಬಹುದು ಎನ್ನುವ ಹೆದರಿಕೆಯಿಂದ ಬಾಯಿ ಬಿಡುವುದಿಲ್ಲ. ಕೊನೆಗೆ ಒಬ್ಬ ಸಣ್ಣ ಹುಡುಗನ ಪಾಲಿಗೆ ಸತ್ಯವನ್ನು ನುಡಿಯುವುದು ಬರುವುದು. ಆಗ ಎಲ್ಲರೂ ಒಪ್ಪುವರು. ಇಲ್ಲಿ ರಾಜಾಜಿಯೇ ಆ ಸಣ್ಣ ಹುಡುಗನಾದರು.

ರಾಜಾಜಿ ಏಪ್ರಿಲ್ ಮೇ ೧೯೪೨ರ ಅಖಿಲ ಭಾರತೀಯ ಕಾಂಗ್ರೆಸ್ ಸಮಿತಿ ಸಭೆಯಲ್ಲಿ ಮುಸ್ಲಿಂ ಜನರಿಗಾಗಿ ಪ್ರತ್ಯೇಕವಾದ ಮಾತೃಭೂಮಿಯ ಸಲುವಾಗಿ ಒಂದು ಗೊತ್ತುವಳಿಯನ್ನು ಮಂಡಿಸಿದರು. ಕಾಂಗ್ರೆಸ್ ಸಮಿತಿ ಈ ಗೊತ್ತುವಳಿಯನ್ನು ತಿರಸ್ಕರಿಸಿ ಭಾರತವನ್ನು ವಿಭಜಿಸುವ ಯಾವುದೇ ಸೂಚನೆ ಯೋಚನೆಯನ್ನು ದೇಶದ ಹಿತಕ್ಕೆ ಮಾರಕ, ಆದ್ದರಿಂದ ಈ ಒಪ್ಪಲಾಗದು ಎನ್ನುವ ಪ್ರತಿ ಗೊತ್ತುವಳಿಯನ್ನು ಸ್ವೀಕರಿಸಿತು. ರಾಜಾಜಿ ಕಾಂಗ್ರೆಸ್ಸಿನ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಆಸಕ್ತಿ ವಹಿಸಲಿಲ್ಲ. ಬಹುಶಃ ರಾಜಾಜಿಯ ಪ್ರಕಾರ ಕಾಂಗ್ರೆಸ್ಸು ಪಾಕಿಸ್ತಾನದ ರಚನೆಗೆ ಮೊದಲೇ ಒಪ್ಪಿದ್ದಲ್ಲಿ ದೇಶಕ್ಕೆ ಸ್ವಾತಂತ್ರ್ಯ ಮುಂಚಿತವಾಗಿಯೇ ಸಿಗುತ್ತಿತ್ತು. ಮಾರ್ಚ್ ೧೯೪೪ ರಾಜಾಜಿ ಕಾಂಗ್ರೆಸ್ಸು ಲೀಗ್ ಮಧ್ಯದಲ್ಲಿ ತಲೆ ದೋರಿದ ಬಿಕ್ಕಟ್ಟನ್ನು ಬಗೆಹರಿಸಲು 'ರಾಜಾಜಿ ಸೂತ್ರ'ವನ್ನು ಮಂಡಿಸಿದರು. ಏಪ್ರಿಲ್ ೮, ೧೯೪೪ ರಲ್ಲಿ ರಾಜಾಜಿ ಜಿನ್ನಾರಿಗೆ ಪತ್ರವನ್ನು ಬರೆದು ತಮ್ಮ ಸೂತ್ರವನ್ನು ಅವರ ಮುಂದಿಟ್ಟರು. ಈ ಸೂತ್ರದ ಪ್ರಕಾರ ಮುಸ್ಲಿಂ ಲೀಗು ಭಾರತಕ್ಕೆ ಸ್ವಾತಂತ್ರ್ಯ ದೊರಕಿಸಲು ಕಾಂಗ್ರೆಸ್ಸಿಗೆ ಸಹಾಯ ಮಾಡಬೇಕು; ಈ ಮಧ್ಯೆ ಅದು ಕಾಂಗ್ರೆಸ್ಸಿನ ಕೂಡ ನಡುಗಾಲ ಸರಕಾರವನ್ನು ರಚಿಸಬೇಕು; ಎರಡನೆಯ ಮಹಾಯುದ್ಧ ಮುಗಿದ ಕೂಡಲೇ ಮುಸ್ಲಿಂ ಜನರ ಸಂಖ್ಯೆ ಹೆಚ್ಚಾಗಿರುವ ಉತ್ತರ ಪಶ್ಚಿಮ ಉತ್ತರ ಪೂರ್ವ ರಾಜ್ಯಗಳನ್ನು ವಿಭಜಿಸಲು ಸಮಿತಿಯನ್ನು ನೇಮಿಸಿ ಜನಮತಗಣನೆ ಮುಖಾಂತರ ಆ ಪ್ರದೇಶಗಳ ಜನರು ಹಿಂದು ಸ್ತಾನದಲ್ಲಿ ಇರಲು ಬಯಸುವರೋ ಇಲ್ಲವೇ ಪಾಕಿಸ್ತಾನ ಸೇರುವರೋ ಎನ್ನುವುದನ್ನು ನಿರ್ಧರಿಸಬೇಕು, ಮುಂತಾದ ವಿಚಾರಗಳು ಅದಕವಾಗಿದ್ದವು. ರಾಜಾಜಿಯವರ ಸೂತ್ರ ಪಾಕಿಸ್ತಾನದ ರಚನೆಗೆ ತನ್ನ ಬೆಂಬಲ ನೀಡಿತ್ತು. ರಾಜಾಜಿ ತಮ್ಮ ವಿಚಾರಕ್ಕೆ ಗಾಂಧೀಯವರ ಬೆಂಬಲ ಇರುವುದಾಗಿ ತಿಳಿಸಿದರು. ಜಿನ್ನಾ ರಾಜಾಜಿಯವರ ಸೂತ್ರವನ್ನು ತಳ್ಳಿ ಹಾಕಿದರು. ಡಾ. ಎನ್. ಬಿ. ಖರೆ, ಅಖಿಲ ಭಾರತದ ಸಿಖ ಲೀಗಿನ ಅಧ್ಯಕ್ಷರಾದ ಸರದಾರ ಹರನಾಮಸಿಂಗ್, ಶ್ರೀನಿವಾಸ ಶಾಸ್ತ್ರಿ ಮುಂತಾದವರು 'ರಾಜಾಜಿ ಸೂತ್ರ'ವನ್ನು ಉಗ್ರವಾಗಿ ಖಂಡಿಸಿದರು. ಇದೇ ರಾಜಾಜಿಯ 'ರಾಜಕೀಯ ಅಪರಾಧ.'

ಕಾಂಗ್ರೆಸ್ ಪಕ್ಷ ರಾಷ್ಟ್ರಪತಿಯ ಆಯ್ಕೆ ನೆಹರೂ ಸರದಾರರಿಗೆ ಬಿಟ್ಟ ನಂತರ, ತೆರೆಮರೆಯ ಭಾರೀ ಪ್ರಯತ್ನದ ಫಲವಾಗಿ ಅಜಾತ ಶತ್ರು ರಾಜೇಂದ್ರ ಪ್ರಸಾದರು ಭಾರತೀಯ ಗಣ–ರಾಜ್ಯದ ಪ್ರಥಮ ರಾಷ್ಟ್ರಪತಿಯಾಗಿ ೧೯೬೨ ರ ವರೆಗೆ ಆ ಹುದ್ದೆಯಲ್ಲಿ ಮುಂದುವರೆದರು. ರಾಜಾಜಿ ತಮ್ಮ ದಿಕ್ಕನ್ನು ಬದಲಾಯಿಸಿ ಕಾಂಗ್ರೆಸ್ ಪಕ್ಷದ ವಿರುದ್ಧ ಸ್ವತಂತ್ರ ಪಕ್ಷ ಸ್ಥಾಪಿಸಿ ನೆಹರೂರ ಪ್ರಮುಖ ವಿರೋಧಿಗಳಾದರು. ●





ಕಿವ್ ಚಿಲ್ ಸನ್

ನಡಿಗೆ ಕುಂಠಿತಗೊಂಡಿರಲಿಲ್ಲ. ದೃಷ್ಟಿಮಾಂದ್ಯ–ಶ್ರವಣ ಸಮಸ್ಯೆಗಳು ಆತನನ್ನು ಕಾಡಿರಲಿಲ್ಲ. ಚಾಂಗ್ ಸತ್ತ ಕಠಿಣ ಕೆಲಸಗಳಲ್ಲಿ ತೊಡಗಿರುತ್ತಿದ್ದನಷ್ಟೇ ಅಲ್ಲ. ಚೆನ್ನಾಗಿ ತಿನ್ನುತ್ತಿದ್ದ. ನಿಯಮಿತವಾಗಿ ಕುಡಿಯುತ್ತಿದ್ದ. ಸದಾ ಧೂಮಪಾನಿಯಾಗಿರುತ್ತಿದ್ದ..." ತಾನೂ ಅಷ್ಟೇ ಎನ್ನುತ್ತಾನೆ ಕಿವ್ ಚಿಲ್ ಸನ್.

ಕಿವ್ ಎಂಬ ವೃದ್ಧೆ ಮೂವತ್ತರ ಎಳವೆಯಲ್ಲೇ ವಿಧವೆಯಾದವಳು. ತನ್ನ ೬೭ ವರ್ಷದ ಸೊಸೆ ಪಾಕ್ ಕಿಲ್ ಸುಳೊಂದಿಗೆ ಸದಾ ಶ್ರಮವಹಿಸಿ ದುಡಿಯುತ್ತಿರುತ್ತಾಳೆ. ಆಕೆಗೆ ಒಟ್ಟು ೨೦ ಜನ ಮೊಮ್ಮಕ್ಕಳು, ಅಷ್ಟೇ ಮರಿಮಕ್ಕಳು. ಅವರೆಲ್ಲರ ಜನ್ಮ ದಿನಾಂಕವನ್ನಾಕೆ ಪಟಪಟನೇ ಹೇಳುತ್ತಾಳೆ. ಅಷ್ಟೇ ಅಲ್ಲ, ದೂರದಿಂದಲೇ ನೋಡಿ ಅವರ ಹೆಸರು ಹಿಡಿದು 'ಬಾ' ಎನ್ನುತ್ತಾಳೆ. ಪಾಕ್ ಕಿಲ್ ಸು ಕೂಡ ಮೂವತ್ತರ ಎಳವೆಯಲ್ಲೇ ವಿಧವೆಯಾದವಳು. "ನನ್ನತ್ತೆ ಒಂದಿನವೂ ಜಡ್ಡು ಎಂದುದನ್ನು ನಾನು ಕೇಳಿಲ್ಲ, ನರಳುತ್ತ ಮಲಗಿದ್ದನ್ನು ನೋಡಿಲ್ಲ" ಎನ್ನುತ್ತಾಳಾಕೆ.

"ನಿಮ್ಮ ದೀರ್ಘಾಯುಷ್ಯದ ಗುಟ್ಟೇನು?" ಎಂದರೆ ಕಿವ್, ತನ್ನ ಅಸ್ಖಲಿತ ಶೈಲಿಯಲ್ಲಿ ನಡುಗದ ಧ್ವನಿಯಲ್ಲಿ ಹೇಳುತ್ತಾಳೆ, "ಸರಿಯಾಗಿ ತಿನ್ನಬೇಕು. ಚೆನ್ನಾಗಿ ದುಡಿಯಬೇಕು. ಆಯಾಸವಾಗುವವರೆಗೂ ದುಡಿದು ಮತ್ತೆ ತಿಂದು ಮಲಗಬೇಕು. ಅದನ್ನು ಬಿಟ್ಟು ಇತರ ಐಷಾರಾಮದೆಡೆ ಮನಸ್ಸು ಹಾಕಿದಿರೋ ಬೇಗನೇ ಮುದುಕರಾಗುತ್ತೀರಿ. ಮುದುಕರಾದರೆ ಅಯಿತಲ್ಲ, ಮೃತ್ಯು ಸದಾ ಕಾಯುತ್ತಿರುತ್ತದೆ."

ಚಾಂಗ್ ಸೂನ ಪರಂಪರೆಯನ್ನಾಕೆ ಒತ್ತಿ ಹೇಳುತ್ತಾಳೆ. ಇಲ್ಲಿಯ ತೊಂಬತ್ತರೊಳಗಿನ ಒಬ್ಬ ಹೇಳುವಂತೆ, ಈ ಪ್ರದೇಶದಲ್ಲಿ ಸಿಕ್ಕುವ ಜಿನ್‌ಸೆಂಗ್ ಎಂಬುವ ಮೂಲಿಕೆಯೊಂದರ ಕುದಿನೀರಿನ ಔಷಧ ಅವರನ್ನು ದೃಢಕಾಯರನ್ನಾಗಿಯೂ ದೀರ್ಘಾಯುಷಿಗಳನ್ನಾಗಿಯೂ ಮಾಡಿದೆಯಂತೆ.

ಈ ಜನರ ದೀರ್ಘಾಯುಷ್ಯದ ರಹಸ್ಯವನ್ನು ತಿಳಿಯಪಡಿಸುವ ದಂತಕಥೆಯೊಂದು ಇಲ್ಲಿ ಪ್ರಚಲಿತವಿದೆ. ಇವರೆಲ್ಲ 'ಯಾಕ್ಚೊ–ಬಾಂಗ್'ನ ಮೂಲನಿವಾಸಿಗಳಂತೆ. 'ಯಾಕ್ಚೊ–ಬಾಂಗ್' ಎಂದರೆ ಔಷಧಿ ಸಸ್ಯದ ಶಿಖರ ಎಂದರ್ಥ. ಅಲ್ಲಿಂದ ಹರಿಯುವ ಚಿಕ್ಕ ಪ್ರವಾಹದ ನೀರಿನಲ್ಲಿ ಔಷಧೀಯ ಗುಣವಿದೆ ಎಂದು ಈ ಜನ ನಂಬುತ್ತಾರೆ. ಈ ನೀರು 'ಪುಲ್ಲೊಸು' ಎಂದು ಕರೆಯಲ್ಪಡುತ್ತದೆ. 'ಪುಲ್ಲೊಸು' ಎಂದರೆ 'ಚಿರಯೌವನ ತರುವ ನೀರು' ಎಂದರ್ಥ.

ಈ ಶಿಖರದ ಸುತ್ತ ದಟ್ಟ ಅರಣ್ಯವಿದೆ. ಅಲ್ಲಿ ಹಿಂಸ್ರ ಪಶುಗಳಷ್ಟೆ ಅಲ್ಲ, ಸದಾ ಹಸಿರು ಮುರಿಯುವ ವೃಕ್ಷರಾಜಿ ಇದೆ. ಈ ಕಾಡಿನಲ್ಲಿ ಅಸಂಖ್ಯಾತ ಔಷಧೀಯ ಸಸ್ಯಗಳಿವೆ.

ಇಲ್ಲಿಯ ಹಿರಿಯರು ಹೇಳುವಂತೆ ಅವರು 'ಪಾಚಿವಾ ಮೊ ಎಲೆಸ್' ಎಂಬ ಚೀನೀ ಔಷಧ ಸಸ್ಯವನ್ನು ನಿತ್ಯ ಸೇವಿಸುತ್ತಾರೆ. ಈ ಸಸ್ಯವನ್ನು ಪೌರಸ್ತ್ಯ ಔಷಧ ತಯಾರಿಕೆದಾರರು ಮೊದಲಿನಿಂದಲೂ ಉಪಯೋಗಿಸುತ್ತಿದ್ದಾರಂತೆ.

ಇದೊಂದು ಬಗೆ. ಪೈನ್ ವೃಕ್ಷಗಳಿಗೆ ಹಬ್ಬಿಕೊಳ್ಳುವಂಥದು. ಇದರಿಂದ ತೆಗೆದ ರಸ ಹೃದಯ ಮತ್ತು ಮೂತ್ರಕೋಶಗಳು ಸರಿಯಾಗಿ ಕೆಲಸ ಮಾಡುವಂತೆ ಮಾಡುತ್ತದಂತೆ. ಅಲ್ಲದೆ ಸ್ತ್ರೀಯರ ಋತುದೋಷಕ್ಕೂ ಇದು ಮದ್ದಂತೆ.

ಕಿಮ್ ಮತ್ತು ಇತರ ಹಿರಿಯರು, ತಾವು 'ಯಾಕೆಸ್ಸೊ-ಜಾಂಗ್'ಗೆ ಋಣಿಗಳೆಂದು ಹೇಳುತ್ತಾರೆ. ಅದರ ಕೃಪೆಯಿಂದಲೆ ತಾವು ದೀರ್ಘಾಯು-ಗಳಾದೆವೆಂದು ಅವರ ಅಭಿಪ್ರಾಯ. ಗಾಲ್ಸೆಕ್ ಎಂಬ ಇನ್ನೊಂದು ವಿವಿಧ ಬೀಜ ಹುಲ್ಲಿನೊಡನೆ ಮತ್ತು [illegible] ಬೆರೆಸಲಾಗುತ್ತದಂತೆ. [illegible] ಫೆಸೆಂಟ್ [illegible] ಮತ್ತಿತರ [illegible] ತಕ್ಕ [illegible]ದಂತೆ.

'ಯಾಕೆಸ್ಸೊ-ಜಾಂಗ್' ಮತ್ತು ಚಿರತಾರುಣ್ಯ ನೀಡುವ 'ಮುಲ್ಲೋಸು'ಗಳ ಜತೆಗೆ ಈ ಜನ ತಮ್ಮ ಹಳ್ಳಿಯ ಇತಿಹಾಸವನ್ನು ಐದುನೂರು ವರ್ಷಗಳ ಹಿಂದಿನ ಒಂದು ರಾಜವಂಶಕ್ಕೆ ಸಂಬಂಧಿಸುವಂತೆ ಮಾಡಿದ್ದಾರೆ. ಇವರು 'ನಾವ್' ವಶಂಜರಂತೆ. 'ನಾವ್' ವಂಶ 'ಈ' ವಂಶಸ್ಥ ರಾಜ ಸೆಜೂನ ಅಡಳಿತದ ಕಾಲಕ್ಕೆ ಚಾಂಗ್ ಸೂ ಜೋನ್‌ನಲ್ಲಿ ನೆಲೆಯೂರಿತಂತೆ.

ನಾವ್ ಉಯ್‌-ಜಿ, ರಾಜ ಸೆಜೋನ ಮಂತ್ರಿಗಳಲ್ಲೊಬ್ಬನ ಹಿರಿಯ ಮಗ. ಆತ ಅಧಿಕಾರಕ್ಕಾಗಿ ನಡೆದ ಕದನದಲ್ಲಿ ಮಡಿದ. ಇದು ಕನ್‌ಫ್ಯೂಶಿಯಸ್‌ವಾದಿಗಳಲ್ಲಿ ಇಬ್ಭಾಗವಾಗುವಂತೆ ಮಾಡಿತು. ನಾವ್ ಉಯ್‌-ಜಿಯ ವಿಧವೆ ಸುರಕ್ಷಿತತೆ ಇಲ್ಲದುದರಿಂದ ತನ್ನ ಒಂಬತ್ತು ವರ್ಷದ ಮಗುನೊಂದಿಗೆ ರಾಜಧಾನಿಯಿಂದ ಓಡಿ ತಲೆಮರೆಸಿಕೊಂಡಳು.

ಆಕೆ ಸಾಯುವಾಗ ಮಗನಿಗೆ ಇಪ್ಪತ್ತೈದು ವರ್ಷ. ಮಗ ಯಾವುದೇ ಸರಕಾರಿ ಸೇವೆಗೆ ಸೇರಬಾರದೆಂಬುದು ಆಕೆಯ ಮನೀಷೆಯಾಗಿತ್ತು. ಅಷ್ಟೇ ಅಲ್ಲ, ನಾವ್ ವಂಶದ ವೃದ್ಧಿ ಹಾಗೂ ಉದ್ಧಾರಗಳ ಜವಾಬ್ದಾರಿಯನ್ನು ಮಗನ ಮೇಲೆ ಹೊರಿಸಿದಳು. ಸಾಯುವ ಮುನ್ನ "ನಾವ್‌ವಂಶ



ಗ್ರಾನ್ನಿ ಕಿಮ್

ದೀರ್ಘಾಯುವಾಗಲಿ" ಎಂದೂ ಆಕೆ ಹರಿಸಿದಳಂತೆ. ನಾವ್‌ವಂಶ ವೃದ್ಧಿಯಾಯಿತು. ಉದ್ಧಾರವಾಯಿತು. ಅದು ಚಾಂಗ್ ಸೂ ಜೋನ್‌ನಲ್ಲಿ ಸ್ಥಾಯಿಯಾಯಿತು.

ಈ ಹಳ್ಳಿಯಾದರೂ ಒಂದು ರಕ್ಷಿತ ಪ್ರದೇಶದಲ್ಲಿ. ಹೀಗಾಗಿ ಕೋರಿಯಾದ ಯಾವ ಯುದ್ಧಗಳಿಂದಲೂ ಈ ಹಳ್ಳಿಗೆ ಧಕ್ಕೆಯೊದಗಿಲ್ಲ, ಪ್ರಾಣಾಪಾಯವಾಗಿಲ್ಲ. ಎಷ್ಟೋ ಜನ ಈ ಹಳ್ಳಿಯಿಂದ ಹೊರಗೆ ಹೆಜ್ಜೆಯನ್ನು ಇಟ್ಟಿಲ್ಲ. ಅಂಥವರಲ್ಲಿ ಕಿಮ್ ಒಬ್ಬಳು.

ಆದರೆ, ದೀರ್ಘಾಯುಷ್ಯವನ್ನು ಹೆಮ್ಮೆಯೆಂದು ಕೊಳ್ಳುವವರಂತೆಯೆ ಅದೊಂದು ಶಾಪ ಎನ್ನುವ ಜನರೂ ಇದ್ದಾರೆ. "ನಾವು ಮುದುಕರು. ಮಕ್ಕಳು, ಮೊಮ್ಮಕ್ಕಳಿಗೆ ಭಾರವಾಗಿ ಎಷ್ಟು ದಿನ ಬದುಕೋಣ?" ಎಂದು ಕೇಳುತ್ತಾರವರು.

('ಕೋರಿಯನ್ ನ್ಯೂಸ್'ನಿಂದ)

# ಸಿಹಿಮೂತ್ರದ ನಿಯಂತ್ರಣ–ಎಷ್ಟು, ಹೇಗೆ?

ಡಾ. ಡಿ. ಎಸ್. ಶಿವಪ್ಪ

ಇಡೀ ಪ್ರಪಂಚದಲ್ಲಿ ಸುಮಾರು ಮೂರು ಕೋಟಿ ಸಿಹಿಮೂತ್ರ ರೋಗಿಗಳು ಇರುವರೆಂದು ಅಂದಾಜಾಗಿದೆ. ರೋಗ ಪತ್ತೆಯಾಗದೆ ಆರೋಗ್ಯವಂತರೆಂಬಂತೆ ಇರುವವರು ಇದರಲ್ಲಿ ಸೇರಿಲ್ಲ. ಅವರಲ್ಲೂ ಸಮೃದ್ಧಿ ಅಷ್ಟಾಗಿ ಇಲ್ಲವಾದರೂ ಅಭಿವೃದ್ಧಿಶೀಲ ನಾಡುಗಳಲ್ಲೂ ಸಾಕಷ್ಟು ಸಿಹಿಮೂತ್ರ ರೋಗಿಗಳಿದ್ದಾರೆ. ವಾಸ್ತವಿಕವಾಗಿ, ಈ ರೋಗದ ಕಾರಣಗಳಿಗೆ ನೆರವಾಗುವ ಅಂಶಗಳಲ್ಲಿ ಕುಪುಷ್ಟಿ (malnutrition) ಮುಖ್ಯವೆನಿಸಿದೆ. ಆದ್ದರಿಂದ ಸಿಹಿಮೂತ್ರ ಈಗ ಬಲ್ಲಿದರಿಗೆ ಮಾತ್ರ ಬರುವ ರೋಗವಾಗಿ ಉಳಿದಿಲ್ಲ.

ಜನಸಾಮಾನ್ಯರ ವಯಸ್ಸು ಹೆಚ್ಚಿದಂತೆಲ್ಲ ಸಿಹಿಮೂತ್ರ ರೋಗದ ಸಂಭವದ ಪ್ರಮಾಣವೂ ಏರುತ್ತಿದೆ. ಅಲ್ಲದೆ ಜನರಲ್ಲಿ ರೋಗವನ್ನು ಪತ್ತೆ ಮಾಡುವ ಶಿಬಿರಗಳು ಜನಪ್ರಿಯವಾಗಿ ಹೆಚ್ಚುತ್ತಿರುವುದೂ ನಿದಾನ-ವಿಧಾನಗಳು ಉತ್ತಮವಿಸುತ್ತಿರುವುದೂ ಇದಕ್ಕೆ ಪುಷ್ಟಿ ಕೊಡುತ್ತಿವೆ. ವಿಶೇಷವಾಗಿ ಏರುವ ವಯಸ್ಸಿನವರ ಜೀವನ ರೀತಿ ನೀತಿಗಳ ಬದಲಾವಣೆ, ಜೀವನ ಒತ್ತಡ (stress), ಬದಲಾದ ಆಹಾರ ಅಭ್ಯಾಸಗಳೇ ಮುಂತಾದವೂ ರೋಗಸಂಭವದ ಪ್ರಮಾಣ ಏರಲು ಸಹಕರಿಸುತ್ತವೆ. ರಕ್ತದ ಏರಿದೊತ್ತಡ, ಗುಂಡಿಗೆಯ ಆಘಾತಗಳಂತೆ ಸಿಹಿಮೂತ್ರ ರೋಗವು 'ಜೀವನ ಒತ್ತಡಗಳಿಗೆ ಹೊಂದಾಣಿಕೆ ಕೆಟ್ಟಿರುವ ರೋಗ'ವೆಂದು ಪರಿಗಣಿಸಲಾಗಿದೆ. ಜನರು ತಮ್ಮ 'ನಿತ್ಯ' ಜೀವನದಲ್ಲಿ ಒತ್ತಡವಿರುವ ಸಂದರ್ಭಗಳಿಗೆ ಹೆಚ್ಚೆಚ್ಚಾಗಿ ಈಡಾಗುತ್ತಿರುವುದರಿಂದ, ಈಗ ಅಮೇರಿಕದ ಸಂಯುಕ್ತ ಸಂಸ್ಥಾನಗಳಲ್ಲಿ ಸಾವಿನ ಎಲ್ಲ ಕಾರಣಗಳಲ್ಲಿ ನಾಲ್ಕನೆಯ ಸ್ಥಾನ ಪಡೆದಿದೆ. ಇತರ ದೇಶಗಳಲ್ಲೂ ಜನರ ಸಾವಿಗೆ ಮುಖ್ಯ ಕಾರಣಗಳಲ್ಲಿ ಒಂದಾಗಿದೆ.

## ಸಂಭವತೆಯ ಅಂಶಗಳು

ಚಿಕ್ಕವಯಸ್ಸಿನಲ್ಲಿ ಎಳೆಯರ (juvenile) ಸಿಹಿಮೂತ್ರ ತೋರುವುದಾದರೂ ಸಿಹಿಮೂತ್ರ ರೋಗ ಬಹುಮಟ್ಟಿಗೆ ವಯಸ್ಕರ ರೋಗವಾದ್ದರಿಂದ ಅದರ ಸಂಭವತೆಯಲ್ಲಿ ಮುಪ್ಪು ಒಂದು ಮುಖ್ಯಾಂಶ.

ಆಹಾರ ಪದಾರ್ಥಗಳು ಧಾರಾಳವಾಗಿ ದೊರೆಯುತ್ತಿರುವುದು ಸಿಹಿಮೂತ್ರದ ಸಂಭವತೆಯನ್ನು ಹೆಚ್ಚಿಸುವ ಇನ್ನೊಂದು ಅಂಶ. ಪುರುಷರಿಗಿಂತಲೂ ಸ್ತ್ರೀಯರಲ್ಲಿ ರೋಗಾಗುವುದು ಹೆಚ್ಚು.

ವಯಸ್ಸಾದವರಲ್ಲಿ ಸಿಹಿಮೂತ್ರ ತಲೆ ಹಾಕಲು ಒಂದು ಅತಿ ಪ್ರಬಲ ಅಂಶ ಬೊಜ್ಜುತನ. ಬೊಜ್ಜು ಹೆಚ್ಚಿದಷ್ಟು ಸಿಹಿಮೂತ್ರದ ಸಂಭವವೂ ಏರುತ್ತದೆ. ಬೊಜ್ಜು ಸುಮಾರಾಗಿದ್ದಾಗ ರೋಗದ ಸಂಭವತೆ ನಾಲ್ಕು ಪಟ್ಟಾದರೆ, ತೀವ್ರತರ ಬೊಜ್ಜು ಬೆಳೆದವರಲ್ಲಿ ಮೂವತ್ತರಷ್ಟಕ್ಕೆ ಏರುವುದು.

ಇನ್ಸುಲಿನ್ ನೆಚ್ಚಿದ ಮತ್ತು ಇನ್ಸುಲಿನ್ ನೆಚ್ಚದ ಎರಡು ಬಗೆಗಳ ಸಿಹಿಮೂತ್ರ ರೋಗಿಗಳಲ್ಲೂ ಅನುವಂಶಿಕತೆಯ ಅಂಶಗಳ ಪಾತ್ರವಿದೆ. ಬೊಜ್ಜಿನ ಬೆಳವಣಿಗೆಯೂ ಬಹುಮಟ್ಟಿಗೆ ಅನುವಂಶಿಕವಾಗಿರುತ್ತದೆ.

ವಯಸ್ಸಾದ ಮೇಲೆ ಬರುವ ಸಿಹಿಮೂತ್ರವೇ ಬಲು ಸಾಮಾನ್ಯವಾದರೂ ಬೇರೆ ರೂಪ, ಬಗೆಗಳೂ ಆಗುತ್ತಿವೆ. ಹೀಗೆ ತೀವ್ರತರ ಕಾಕುಪುಷ್ಟಿಯೂ ವಿಷಕಣದ (virus) ಸೋಂಕೂ ವಿಶೇಷವಾಗಿ ಮಕ್ಕಳಲ್ಲಿ ಸಿಹಿಮೂತ್ರಕ್ಕೆ ಕಾರಣಗಳು. ಭಾರತವೂ ಸೇರಿದಂತೆ ಹಲವು ನಾಡುಗಳಲ್ಲಿ ಕಾಕುಪುಷ್ಟಿಗೆ ಸಂಬಂಧಿಸಿದಂತೆ ಜೆ (ಜಮೈಕ) ಮಾದರಿಯ ಸಿಹಿಮೂತ್ರವನ್ನು ಕಾಣುತ್ತಿರುವೆವು. ಅನುವಂಶಿಕವಾಗಿ ಈಡಾಗುವ ಗುಂಪೂ ವಿಶೇಷವಾಗಿ ಕರುಳಿನ ವಿಷಕಣವಾದ ಬಿ–೪ ಕಾಕ್ಸಸ್ಯಾಕಿ ಮಂಗಬಾವು, ಸೀಮೊಡಾರಗಳ (rubella) ವಿಷಕಣಗಳ ಸಂಯೋಗವೇ ಎಳೆಯರಲ್ಲಿ ಸಿಹಿಮೂತ್ರ ತಲೆದೋರಲು ಕಾರಣವೆಂದು ಪರಿಗಣಿಸಲಾಗಿದೆ. ಈ ಬಗೆಯ ಸಿಹಿಮೂತ್ರ ಭಾರತದಲ್ಲಿ ಬಹಳವಾಗಿ ಕಂಡುಬಂದಿಲ್ಲ. ಬೊಜ್ಜಿನಿಂದ ರೋಗ ಸಂಭವ ಹೆಚ್ಚುವುದಾದರೂ ಬೊಜ್ಜನ್ನು ಮೈಯಲ್ಲಿ ಕೊಬ್ಬುಗೂಡಿರುವುದನ್ನು ಸರಿಪಡಿಸಿದ ಮೇಲೆ ಸಕ್ಕರೆಯ ಮಿತಿಗೆಟ್ಟ ಬಳಕೆಗೂ ಸಿಹಿಮೂತ್ರದ ಸಂಭವತೆ ಯಾವ ಸಂಬಂಧವೂ ಕಂಡುಬಂದಿಲ್ಲ. ಆದರಿಂದ ಸಿಹಿಮೂತ್ರದ ನಿಯಂತ್ರಣದಲ್ಲಿ ಬೊಜ್ಜು ಮುಖ್ಯವೇ ಹೊರತು ಕೇವಲ ಸಕ್ಕರೆಯ ಅತಿ ಸೇವನೆ ಅಲ್ಲ.

## ಸಿಹಿ ಮೂತ್ರದ ಪತ್ತೆ

ಸಿಹಿಮೂತ್ರವನ್ನು ಎಳೆಯದರಲ್ಲೇ ಪತ್ತೆಮಾಡಿ ರಕ್ತ ಸಕ್ಕರೆಯೇರಿಕೆಯನ್ನು (hyperglycaemia) ಸರಿಯಾಗಿ ನಿಯಂತ್ರಿಸಿದರೆ ರೋಗವೂ ಅದರಿಂದಾಗುವ ಸಾವೂ ಇಳಿಯುವುದೆಂಬ ಸಾಮಾನ್ಯ ನಂಬಿಕೆಯಿದೆ. ಎಳೆಯದರಲ್ಲೇ ಪತ್ತೆಯಾಗಿ ನಿಯಂತ್ರಿಸಲು ಬಹುಮಟ್ಟಿಗೆ ನೆರವಾಗುವ ಅಂಶಗಳು ಹಲವಾರು. ಬೊಜ್ಜು ಬೆಳೆದ ವಯಸ್ಕರು, ಕುಟುಂಬದಲ್ಲಿ ಸಿಹಿಮೂತ್ರವಿರುವ ಸಂಬಂಧಿಗಳು ದೀರ್ಘಕಾಲದ ತೀವ್ರ ಒತ್ತರಕ್ಕೀಡಾಗುತ್ತಿರುವವರು. ವಿಪರೀತ ಕಾಕುಪುಷ್ಟಿಗೆ ಈಡಾದವರೇ ಅಲ್ಲದೆ ಮೈತೂಕದ ಇಳಿತ, ಸುಲಭವಾಗಿ ದಣಿಯುವಿಕೆ, ಕೈ ಕಾಲು ಜಳುಕು ಸ್ನಾಯುಗಳ ಉಳುಕು, ಬಹುಮೂತ್ರ, ಅತಿ ನೀರಡಿಕೆ, ಮಿತಿಗೆಟ್ಟು ತಿನ್ನುವಿಕೆಯಂತಹವು ರೋಗದ ಮೊದಮೊದಲ ಲಕ್ಷಣ, ಚಿಹ್ನೆಗಳಿರುವವರ ರಕ್ತದ ಸಕ್ಕರೆಯ ಮಟ್ಟದ ಪರೀಕ್ಷೆಯೇ ಸಿಹಿಮೂತ್ರ ರೋಗವನ್ನು ಮುಂಚೆಯೇ ಕಂಡು ಹಿಡಿದು ಚೆನ್ನಾಗಿ ನಿಯಂತ್ರಿಸಲು ಬಹಳವಾಗಿ ನೆರವಾಗುತ್ತದೆ. ಜನರೆಲ್ಲರಲ್ಲೂ ಸಿಹಿಮೂತ್ರ ರೋಗವನ್ನು ಪತ್ತೆಮಾಡುವ ಶಿಬಿರಗಳಲ್ಲಿ ವಿಶೇಷವಾಗಿ ಊಟವಾದ ಮೇಲಿನ ಮೂತ್ರದ ಸಕ್ಕರೆಗಾಗಿ ಮಾಡುವ ಪರೀಕ್ಷೆಯೇ ಅತಿ ಸರಳವಲ್ಲದೆ ಕಡಿಮೆ ಖರ್ಚಿನ ವಿಧಾನ. ಆದರೆ ಇದು ವಿಶಿಷ್ಟ ಪರೀಕ್ಷೆಯಲ್ಲ. ಮೂತ್ರದಲ್ಲಿ ಆಗ ಸಕ್ಕರೆ ತೋರದಿದ್ದರೆ ಸಿಹಿಮೂತ್ರವಿಲ್ಲವೆಂದು ಖಚಿತವಾಗಿ ಹೇಳಬರುವದಿಲ್ಲ. ಆದರೂ ಸಿಹಿಮೂತ್ರವನ್ನು ಪತ್ತೆಮಾಡುವ ಪೂರ್ವಭಾವಿ ಪರೀಕ್ಷೆಯಾಗಿ ಈ ವಿಧಾನ ಆಸ್ಪತ್ರೆ, ಔಷಧಾಲಯ, ಕ್ಲಿನಿಕ್ಕು, ಆರೋಗ್ಯ ಶಿಬಿರ, ಪ್ರಯೋಗಾಲಯಗಳಲ್ಲಿ ರೂಢಿಯಲ್ಲಿದೆ. ಇದೂ ಒಂದಿಷ್ಟು ಉಪಯುಕ್ತವಾಗಬಲ್ಲದು.

ರೋಗವನ್ನು ಪತ್ತೆ ಮಾಡುವುದರಲ್ಲಿ ರಕ್ತದ ಸಕ್ಕರೆ ಮಟ್ಟದ ಪರೀಕ್ಷೆ ಅತ್ಯುತ್ತಮವಲ್ಲದೆ ಸಾಕಷ್ಟು ಸೂಕ್ತ ವಿಧಾನ ಎನ್ನುವುದರಲ್ಲಿ ಅನು

ಮಾಣವೇ ಇಲ್ಲ. ಈ ಪರೀಕ್ಷೆಗಳಲ್ಲಿ ಯಾವುದರಿಂದಾದರೂ ರಕ್ತಸಕ್ಕರೆ ಏರುವುದು ಕಂಡರೆ, ಬಾಯಿಯಿಂದೀಯುವ ದ್ರಾಕ್ಷಿಸಕ್ಕರೆ ಸಹನೆ ಪರೀಕ್ಷೆಯೂ (oral glucose tolerance test) ಸೇರಿದಂತೆ ವಿವರವಾದ ಪರೀಕ್ಷೆಯನ್ನು ಮಾಡಲೇ ಬೇಕು. ಇಲ್ಲದಿದ್ದರೆ ಕಣ್ಣು ತಪ್ಪಿಹೋಗುವ ಪ್ರತಿಕ್ರಿಯೆಯಾಗಿ ತೋರುವ ರಕ್ತಸಕ್ಕರೆಯಿಳಿತವನ್ನು (hypoglycaemia) ಕಂಡುಹಿಡಿಯಲು ವಿವರ ಪರೀಕ್ಷೆ ಸಹಾಯಕ.

## ಸಿಹಿಮೂತ್ರದ ತೊಡಕುಗಳು

ಸಿಹಿಮೂತ್ರದ ಬಹುಪಾಲು ತೊಡಕುಗಳಿಗೆ ಹಲವು ಅಂಶಗಳ ಸಂಯೋಗ ಕಾರಣ. ಅವು ಯಾವವೆಂದರೆ ಕಿರಿಯ ರಕ್ತನಾಳಗಳಲ್ಲೂ ಧಮನಿಗಳಲ್ಲೂ ಆಗುವ ರೋಗದ ಬದಲಾವಣೆಗಳು ಊತಕಗಳಲ್ಲಾಗುವ (tissues) ಜೀವವಸ್ತುಕರಣದ (metabolism) ವ್ಯತ್ಯಾಸಗಳು, ವಿಷಕಣದ ಮತ್ತು ಏಕಾಣುಜೀವಿಕ (bacterial) ಸೋಂಕುಗಳು ಮತ್ತು ರಕ್ತದಲ್ಲಾಗುವ ಜೀವರಸಾಯನಿಕ ಬದಲಾವಣೆಗಳು.




ಸರಿಯಾದ ಆಹಾರ, ಪಥ್ಯ, ಔಷಧ ಸೇವನೆಯ ಕ್ರಮಗಳಿಂದಲ್ಲದೆ, ದೈಹಿಕ ವ್ಯಾಯಾಮದಿಂದಲೂ ಸಿಹಿಮೂತ್ರದಲ್ಲಿ ದೈಹಿಕ ಜೀವವಸ್ತುಕರಣವನ್ನು ಸರಿಯಾಗಿ ನಿಯಂತ್ರಿಸಿದ್ದಾದರೆ ತೊಡಕುಗಳು ಆಗುವುದನ್ನೇ ಕಡಿಮೆ ಮಾಡಬಹುದು.

ಹೊರರೋಗಿಗಳ ಚಿಕಿತ್ಸೆ, ಆರೋಗ್ಯ ಪ್ರಚಾರ, ಸಿಹಿಮೂತ್ರ ರೋಗದ ನಿರ್ವಹಣೆಯಲ್ಲಿ ಜನಸಾಮಾನ್ಯರ ಆಸಕ್ತ ಪಾತ್ರ ಇವುಗಳಿಂದಲೂ ತೊಡಕುಗಳನ್ನು ಬಹುಮಟ್ಟಿಗೆ ನಿಯಂತ್ರಿಸಬಹುದು.

ಹೆರಿಗೆಯ ಮುಂಚೆಯೇ ಸಿಹಿಮೂತ್ರವನ್ನು ಚೆನ್ನಾಗಿ ನಿಯಂತ್ರಿಸುವುದರಿಂದ ಹೆರಿಗೆಗೆ ಸಂಬಂಧಿಸಿದಂತೆ ರೋಗ ಉಲ್ಬಣವಾಗುವುದನ್ನು ತಪ್ಪಿಸಬಹುದು.

ಸಿಹಿಮೂತ್ರ ಅನುಭವಿಸುತ್ತಿರುವ ರೋಗಿಗಳು ನರಳುವುದೇ ಇಲ್ಲದೆ, ಹೆರಿಗೆಯ ಸಂಬಂಧದಲ್ಲಿ ಅವರ ಕೂಸು ರೋಗಕ್ಕೀಡಾಗುವುದೂ ಹೆಚ್ಚು. ಅಂತಹ ಕೂಸುಗಳು ಬಹುವಾಗಿ ಸತ್ತು ಹುಟ್ಟುತ್ತವೆ, ಇಲ್ಲವೇ ಹುಟ್ಟಿದಾಗಲೇ ವಿಕಲವಾಗಿರುತ್ತವೆ.

## ಸಿಹಿಮೂತ್ರದ ನಿಯಂತ್ರಣ

ತೊಡಕುಗಳೇಳುವುದನ್ನು ತೀರ ಕಡಿಮೆ ಮಾಡುವುದೇ ಸಿಹಿಮೂತ್ರ ನಿಯಂತ್ರಣದ ಮುಖ್ಯೋದ್ದೇಶ. ಇದಕ್ಕಾಗಿಯೇ, 'ಸಿಹಿಮೂತ್ರವಿಲ್ಲದವರ ಸ್ಥಿತಿಗೆ ಎಷ್ಟು ಸಾಧ್ಯವೋ ಅಷ್ಟು ಹತ್ತಿರ ರಕ್ತದ ಸಕ್ಕರೆಯ ಮಟ್ಟಗಳು ಇರುವಂತೆ ವೈದ್ಯರು ಶ್ರಮಿಸಬೇಕು' ಎಂದು ಆಧುನಿಕ ಸಿಹಿಮೂತ್ರ [illegible] ಕರೆಯುತ್ತದೆ. ರಕ್ತದಲ್ಲಿ ಸಕ್ಕರೆಯ ಮಟ್ಟ ಏರಿದಂತೆಲ್ಲ ನೇರವಾಗಿ ಲೋಮನಾಳಜೀರ್ಣತೆಗೆ (microangiopathy) ಕಾರಣ ಆಗುತ್ತದೆಂಬ ಭಾವನೆಗಳನುಸಾರವಾಗಿದೆ ಈ ಸೂಚನೆ. ಈ ಲೋಮನಾಳ [illegible]

ರೂಪದಲ್ಲಿ ಹಲವಾರು ಪರಿಣಾಮಗಳೇಳುತ್ತವೆ.

ಎಲ್ಲರ ಮೈಯಲ್ಲೂ ರಕ್ತದ ದ್ರಾಕ್ಷಿಸಕ್ಕರೆ (glucose) ರಕ್ತಬಣ್ಣಕದಲ್ಲದೆ (haemoglobin) ರಕ್ತರಸದಲ್ಲಿರುವ ಪ್ರೋಟೀನುಗಳೊಂದಿಗೆ ಸಂಯೋಗವಾಗಿ ಗ್ಲೈಕೋಸುಘಟಿತ (glycosylated) ಸಂಯುಕ್ತಗಳಾಗುತ್ತವೆ. ಈ ಸಂಯುಕ್ತಗಳಿಂದ ಊತಕಗಳಿಗೆ ಹಾನಿಯಾಗಿ ಅದರಿಂದ ಕಣ್ಣಿನ ಮಸೂರಯಂತ್ರದ ಜೀವಾಳವೆನಿಸಿದ ಅಂಗಭಾಗಗಳಂತಹಲ್ಲಿ ರೋಗ ತಲೆದೋರಬಹುದು.

ಮೇಲೆ ಸೂಚಿಸಿದ ಭಾವನೆಗನುಸಾರವಾಗಿ ರಕ್ತದಲ್ಲಿರುವ ಸಕ್ಕರೆಯ ಮಟ್ಟವನ್ನು ಇಳಿಸುವುದರಲ್ಲಿ ಪ್ರಚಂಡ ರೋಗ ಚಿಕಿತ್ಸೆಯನ್ನು ಕೈಗೊಳ್ಳುವಂತಾಗಿದೆ. ಏನೇ ಆದರೂ ಸ್ವಾಭಾವಿಕ ಮಟ್ಟದ ಹತ್ತಿರಕ್ಕೆ ಬರುವಂತೆ ರಕ್ತದ ಸಕ್ಕರೆಯ ಮಟ್ಟಗಳನ್ನು ಸಾಧಿಸುವ ತೀವ್ರತರ ಕ್ರಮಗಳಿಂದ ಅಪಾಯ ಆಗಬಹುದೆಂಬುದನ್ನು ಮನಗಾಣಬೇಕು. ರಕ್ತದ ಸಕ್ಕರೆಯ ಮಟ್ಟಗಳಿಗೂ ಲೋಮನಾಳ ಬೇನೆಗೂ ಇರುವ ಸಂಬಂಧದ ವಿಚಾರವಾಗಿ ಏಕಾಭಿಪ್ರಾಯ ಇಲ್ಲವಾದ್ದರಿಂದ, ರಕ್ತದ ಸಕ್ಕರೆಯ ಮಟ್ಟಗಳನ್ನು ಇಳಿಸಲು ಅಂತಹ ಕ್ರಮಗಳನ್ನು ಕೈಗೊಳ್ಳುವುದರ ಅನುಕೂಲಗಳನ್ನು ರಕ್ತ ಸಕ್ಕರೆಯಿಳಿತದಿಂದ ಆಗಬಹುದಾದ ನರಗಳ ಹಾನಿಯ ಸಾಧ್ಯತೆಯನ್ನೂ ತೂಗಿನೋಡಬೇಕು.

ಪ್ರಾಣಿಗಳ ಮೇಲೆ ಪ್ರಯೋಗಗಳನ್ನು ನಡೆಸಿ ನೋಡಿದಾಗ ರಕ್ತದ ಸಕ್ಕರೆಯ ಮಟ್ಟಕ್ಕೂ ಲೋಮನಾಳ ಬೇನೆಗೂ ಸಂಬಂಧವಿರುವ ಸ್ಪಷ್ಟ ಸೂಚನೆ ಕಂಡರೂ ಈ ಕಣ್ಣುಡಿಕೆಗಳನ್ನು ನೇರವಾಗಿ ಮಾನವನ ಸಿಹಿ ಮೂತ್ರಕ್ಕೂ ಎಷ್ಟರ ಮಟ್ಟಿಗೆ ಅನ್ವಯಿಸಬಹುದು ಎನ್ನುವುದರಲ್ಲಿ ಅನುಮಾನವಿದೆ. ಆದ್ದರಿಂದಲೇ ತೀವ್ರ ಚಿಕಿತ್ಸೆಯಿಂದ ರಕ್ತದ ಸಕ್ಕರೆಯ ಮಟ್ಟದ ನಿಯಂತ್ರಣ ಇನ್ನಷ್ಟು ವಿವೇಚನಾಯುಕ್ತ ಆಗಬೇಕಾಗುತ್ತದೆ. ಇಲ್ಲಿ ಒಂದು ವಿಷಯವನ್ನು ಒತ್ತಿ ಹೇಳಬೇಕಾಗಿದೆ. ರಕ್ತ ಸಕ್ಕರೆಯೇರಿಕೆ ರಕ್ತಸ್ಕರೆಯಿಳಿಕೆಯಿಂದ ಆಗುವ ರಕ್ತಸಕ್ಕರೆಯಿಳಿತವೇ ಬಹುಕಾಲದಿಂದಿರುವ ಸಿಹಿಮೂತ್ರ ರೋಗಿಗಳ ಚಿಕಿತ್ಸೆಯಿಂದೇಳುವ ಅತಿ ಸಾಮಾನ್ಯ ತೊಡಕು. ಎಳೆಯರ ಸಿಹಿಮೂತ್ರದಲ್ಲಿ ಹೀಗಾಗುವುದು ಹೆಚ್ಚು. ಆದ್ದರಿಂದಲೇ ಇಂತಹ ತೊಡಕುಗಳನ್ನು ತಪ್ಪಿಸಲು ಒಂದು ಕಣ್ಣಿಟ್ಟುಕೊಂಡು ಸಿಹಿಮೂತ್ರವನ್ನು ನಿಭಾಯಿಸುವುದೆಂದರೆ ಬಲು ಚಮತ್ಕಾರದ ಕೆಲಸ.

ರಕ್ತದ ಸಕ್ಕರೆಯನ್ನು ನಿಯಂತ್ರಿಸಲು ಹೇಳುವ ವಿಧಾನಗಳಲ್ಲಿ ಪ್ರತಿಕ್ರಿಯೆ ಸ್ವನಿಯಂತ್ರಣ (bio-feedback)* ತಂತ್ರವೂ ಒಂದು. ಇದರಲ್ಲಿ ವಿದ್ಯುತ್ಸ್ನಾಯು ಚಿತ್ರಕದ (electromyograph) ನೆರವಿನಿಂದ ಸ್ನಾಯುವಿನ ಸಡಿಲತೆಯನ್ನು ಸಾಧಿಸಬಹುದು. ಈ ತಂತ್ರದ ಹಿಂದಿರುವ ಕಲ್ಪನೆ ಹೀಗಿದೆ: ಮನಸ್ಸಿನ ಒತ್ತರದಿಂದ ಸ್ನಾಯುಗಳ ಸೆಡೆತದೊಂದಿಗೆ ರಕ್ತದ ಸಕ್ಕರೆ ಏರುವಂತಾಗುತ್ತದೆ. ಸ್ನಾಯು ಸಡಿಲತೆಯಿಂದ ಆರಾಮಗೊಳಿಸುವ ತಂತ್ರೋಪಾಯಗಳಿಂದ ಅದು ಇಳಿಯುವುದಲ್ಲದೆ ಹಾಗೇ ಸ್ಥಿರವಾಗಬಲ್ಲದು. ಇದರಿಂದ ಸಿಹಿಮೂತ್ರವನ್ನು ನಿಯಂತ್ರಿಸಿದಂತಾಗುತ್ತದೆ. ಪ್ರತಿಕ್ರಿಯೆ– ಸ್ವನಿಯಂತ್ರಣ ತಂತ್ರಗಳಿಂದ ಇನ್ಸುಲಿನ್ನಿನ ಬೇಡಿಕೆಯೂ ತಗ್ಗಬಹುದು. ಸಿಮೂತ್ರದ ನಿಯಂತ್ರಣ ಎಷ್ಟರ ಮಟ್ಟಿಗೆ ನಡೆಯುತ್ತಿದೆಯೆಂದು ಗುರುತಿಸುವುದು ಅಷ್ಟೇನೂ ಸುಲಭವಲ್ಲ. ಯಾವಾಗಲೋ ಒಮ್ಮೆ ತೆಗೆದುನೋಡಿದ ಉಪವಾಸದ, ಊಟವಾದ ಮೇಲಿನ, ಇಲ್ಲವೇ ಪೂರ್ಣ ದ್ರಾಕ್ಷಿಸಕ್ಕರೆ ಸಹನೆ ಪರೀಕ್ಷೆಯಲ್ಲಿ ಕಂಡುಬಂದ ರಕ್ತದ ದ್ರಾಕ್ಷಿಸಕ್ಕರೆಯ ಮಟ್ಟಗಳು ಕೇವಲ ಪರೀಕ್ಷಿಸಿದಾಗಿನ ಆ ಹೊತ್ತಿನ ದತ್ತಾಂಶಗಳನ್ನು (data) ಮಾತ್ರ ಸೂಚಿಸುತ್ತವಷ್ಟೆ. ಪರೀಕ್ಷಿಸುವುದಕ್ಕೆ ಕೊನೆಯ ಪಕ್ಷ ೧೦–೧೨ ವಾರಗಳ ಹಿಂದಿನಿಂದಲೂ ರಕ್ತದ ಸಕ್ಕರೆಯ ಮಟ್ಟ ಎಲ್ಲೆಲ್ಲಿತ್ತೆಂಬ ಮಾಹಿತಿ

---

* 'ಕಸ್ತೂರಿ', ಜನವರಿ ೧೯೮೨ರ ಸಂಚಿಕೆಯ ೩೮ನೇ ಪುಟದಲ್ಲಿ ಪ್ರಕಟವಾದ, 'ಬಯೋ-ಫೀಡ್ ಬ್ಯಾಕ್ ಎಂದರೇನು?' ಲೇಖನ –ಸಂ.

ಯನ್ನು ಪಡೆಯಲು ಗ್ಲೂಕೋಸುಭರಿತ ರಕ್ತ ಬಣ್ಣಕವನ್ನು ಅಳೆಯುವುದೇ ಇನ್ನೂ ಲೇಸಾದ ವಿಧಾನ. ಒಂದು ಕೆಂಪು ರಕ್ತಕಣದ ಜೀವನ ಕಾಲ ಮೂರು ತಿಂಗಳು. ಅದು ರಕ್ತದಲ್ಲಿರುವ ತನಕ ಯಾವಾಗಲೂ ಗ್ಲೂಕೋಸನ್ನೇ ತನಗೆ ಅಂಟಿಸಿಕೊಳ್ಳುತ್ತಿರುವುದರಿಂದ ರಕ್ತದಲ್ಲಿನ ದ್ರಾಕ್ಷಿಸಕ್ಕರೆಯ ಮಟ್ಟದಲ್ಲಿನ ಏರಿಳಿತಗಳನ್ನೂ ಇದು ಅತ್ಯಂತ ಖಚಿತವಾಗಿ ಮರುಬಿಂಬಿಸುವುದು. ಆದ್ದರಿಂದ ಯಾವಾಗಲೋ ಒಮ್ಮೊಮ್ಮೆ ರಕ್ತದ ಸಕ್ಕರೆಯ ಮಟ್ಟವನ್ನು ಅಳೆಯುವುದಕ್ಕಿಂತಲೂ ಗ್ಲೂಕೋಸುಭರಿತ ರಕ್ತಬಣ್ಣಕವನ್ನು ಅಳೆಯುವುದರಿಂದ ಸಿಹಿಮೂತ್ರದ ನಿಜಸ್ಥಿತಿ ಇನ್ನೂ ಖಚಿತವಾಗಿ ಅರ್ಥವಾಗುತ್ತದೆ. ಮುಂದುವರಿದ ನಾಡುಗಳಲ್ಲಿ ಸಿಹಿಮೂತ್ರದ ನಿಯಂತ್ರಣ ಎಷ್ಟರಮಟ್ಟಿಗೆ ಸಾಧಿಸಿದೆಯೆಂದು ಅರಿಯಲು ಈಗ ಈ ವಿಧಾನವನ್ನೇ ವ್ಯಾಪಕವಾಗಿ ಬಳಸಲಾಗುತ್ತಿದೆ. ಈಗ ಭಾರತದಲ್ಲೂ ಮಹಾನಗರಗಳ ದೊಡ್ಡ ಆಸ್ಪತ್ರೆಗಳಲ್ಲೂ ಇದು ಬಳಕೆಯಲ್ಲಿದೆ.

ಆಗೊಮ್ಮೆ ಈಗೊಮ್ಮೆ ದೊಡ್ಡ ಪ್ರಮಾಣಗಳಲ್ಲಿ ಇನ್ಸುಲಿನ್ನನ್ನು ಚುಚ್ಚುವುದರ ಬದಲಾಗಿ ನಿಧಾನವಾಗಿ ಒಂದೇ ಸಮನಾಗಿ ಎಡಬಿಡದೆ ಕೊಡುತ್ತ ಸಿಹಿಮೂತ್ರವನ್ನು ನಿಯಂತ್ರಿಸುವುದರಿಂದ ಇನ್ನೂ ಉತ್ತಮ ಫಲ ದೊರೆಯುತ್ತದೆಂದು ಪ್ರಯೋಗಗಳಿಂದ ವ್ಯಕ್ತಪಟ್ಟಿದೆ. ಮೈಯಲ್ಲಿ ರಕ್ತದ ಸಕ್ಕರೆಯ ಮಟ್ಟ ಹಗಲೂ ರಾತ್ರಿ ದೇಹದ ಬೇಕು ಬೇಡಗಳಿಗೆ ತಕ್ಕಂತೆ ಅಲೆಯಲೆಯಂತೆ ಏರಿಳಿಯುತ್ತಿರುತ್ತದೆ. ಇದಕ್ಕೆ ತಕ್ಕ ಹಾಗೆ ಇನ್ಸುಲಿನ್ ಬಿಡುಗಡೆಯೂ ಆಗುತ್ತಿರುವುದು. ಆದರೆ ಹೊರಗಿನಿಂದ ಒಮ್ಮೊಮ್ಮೆ ಚುಚ್ಚಿದ ಇನ್ಸುಲಿನ್ ಏರಿಳಿಯುತ್ತಿರುವ ರಕ್ತಸಕ್ಕರೆಯ ಮಟ್ಟವನ್ನು ಅನುಸರಿಸಲಾರದು. ಇದರಿಂದ ನಡುನಡುವೆ ಸರಕ್ಕನೆ ರಕ್ತ ಸಕ್ಕರೆಯಿಳಿತವೂ ಆಗುವುದುಂಟು. ರಕ್ತಸಕ್ಕರೆಯ ನಿಡುಗಾಲದ ನಿಯಂತ್ರಣಕ್ಕಾಗಿ ಇತ್ತೀಚೆಗೆ ಹೊಸದಾಗಿ ಒಂದು ಸಾಧನ ಸಲಕರಣೆ ತಯಾರಾಗಿ ಬಂದಿದೆ. ಈ ಎಲೆಕ್ಟ್ರಾನಿಕ್ ಸಾಧನವನ್ನು ನಿಮಿಷಕ್ಕೊಮ್ಮೆ ರಕ್ತ ಸಕ್ಕರೆಯ ಮಟ್ಟವನ್ನು ಅದೇ ಗುರುತಿಸುತ್ತಲೇ ಇರುವುದಲ್ಲದೆ ಗಣಕಯಂತ್ರದ ಮೂಲಕ ಲೆಕ್ಕಹಾಕಿ ಅಗತ್ಯಕ್ಕೆ ತಕ್ಕಷ್ಟು ಇನ್ಸುಲಿನ್ನನ್ನೂ ಅದರಷ್ಟಕ್ಕೆ ಅದೇ ಕೊಂಚಕೊಂಚವಾಗಿ ರಕ್ತಕ್ಕೆ ಸೇರಿಸುತ್ತಿರುತ್ತದೆ. ಈ ಸಾಧನವನ್ನು ಕೃತಕ ಮಾಂಸಲಿ (pan-creas) ಎನ್ನುವುದುಂಟು. ಇದರೊಳಗೆ ಇನ್ಸುಲಿನ್ ಉಪ್ಪು ನೀರು, ದ್ರಾಕ್ಷಿಸಕ್ಕರೆಯೂ ತುಂಬಿರುವುದರಿಂದ ದೇಹದ ಬೇಕುಗಳನ್ನು ಗುರುತಿಸಿ ಅವಶ್ಯವಾದ ಇನ್ಸುಲಿನ್ ಇಲ್ಲವೇ ದ್ರಾಕ್ಷಿ ದ್ರಾಕ್ಷಿಸಕ್ಕರೆಯನ್ನು ರಕ್ತಕ್ಕೆ ಬಿಡುವುದು. ಹೊರಗಿನಿಂದ ಹೀಗೆ ದ್ರಾಕ್ಷಿಸಕ್ಕರೆಯನ್ನು ನೀಡುವ ಬದಲಾಗಿ ದೇಹಾಂತರ್ಗತ ದ್ರಾಕ್ಷಿಸಕ್ಕರೆಯನ್ನೇ ನೀಡಲು ಗ್ಲೂಕಗಾನ್ ಚೋದನಿಯನ್ನು (hormone) ಇದರಲ್ಲೇ ಸೇರಿಸುವ ಯತ್ನಗಳಾಗುತ್ತಿವೆ. ಗ್ಲೂಕಗಾನಿನ ಪ್ರಭಾವ ಇನ್ಸುಲಿನ್ನಿನ ತದ್ವಿರುದ್ಧ. ಮೈಯಲ್ಲಿ ರಕ್ತಗತವಾದ ಹೆಚ್ಚಿನ ದ್ರಾಕ್ಷಿಸಕ್ಕರೆ ಈಲಿಯಲ್ಲಿ (liver) ಮಿಗದಿಟ್ಟಾಗಿ (glycogen) ಪರಿವರ್ತಿತವಾಗಿ ಸಂಚಯಿಸಿರುತ್ತದೆ. ಗ್ಲೂಕಗಾನ್ ಈ ಮಿಗದಿಟ್ಟನ್ನು ಒಡೆದು ದ್ರಾಕ್ಷಿಸಕ್ಕರೆಯನ್ನು ಬಿಡುಗಡೆ ಮಾಡುವುದು. ರಕ್ತಸಕ್ಕರೆಯ ಮಟ್ಟವನ್ನು ಸಹಜ ಸ್ಥಿತಿಗೆ ಆದಷ್ಟೂ ಹತ್ತಿರ ಇರಿಸುವುದೇ ಈ ಯತ್ನಗಳ ಮುಖ್ಯ ಗುರಿ.

ಸಿಹಿಮೂತ್ರ ರೋಗವನ್ನು ಎಳೆಯದರಲ್ಲೇ ಪತ್ತೆ ಮಾಡಲು ಒಂದು ಸಮಗ್ರ ವ್ಯಾಪಕ ಕಾರ್ಯಕ್ರಮ ರೋಗಗಳು ಹೊರ ರೋಗಿಗಳಾಗಿ ಬಂದಾಗಿನ ಪಾಲನೆ, ಆರೋಗ್ಯದ ಪ್ರಚಾರ, ಇನ್ಸುಲಿನ್ನಿನ ವಿತರಣೆಯಲ್ಲಿ ಸಮರ್ಪಕ ವ್ಯವಸ್ಥೆ, ರೋಗದ ಪತ್ತೆಯಲ್ಲಿ ಜನಸಮುದಾಯವೆಲ್ಲ ಭಾಗವಹಿಸುವುದೇ ಮುಂತಾದವು ಸಿಹಿಮೂತ್ರವನ್ನೇ ಅಲ್ಲದೆ ಅದರ ಪರಿಣಾಮಗಳು, ತೊಡಕುಗಳನ್ನೂ ನಿಯಂತ್ರಿಸುವುದರಲ್ಲಿ ಚೆನ್ನಾಗಿ ನೆರವಾಗುತ್ತವೆ. ●



ಸಾವಿರಾರು ಕುಟುಂಬಗಳು, ಚಿರಕಾಲದಿಂದ
ಬಳಕೆಯಲ್ಲಿರುವ ಲವಂಗದೆಣ್ಣೆಯ
ಗುಣಗಳನ್ನು ಪ್ರಾಮಿಸ್‌ನಲ್ಲಿ ಕಾಣುತ್ತವೆ.

# ಲವಂಗದ ಎಣ್ಣೆಯುಳ್ಳ ಅಪೂರ್ವ ಟೂಥ್‌ಪೇಸ್ಟ್ ಪ್ರಾಮಿಸ್

ನೀವೂ ಇದನ್ನು ಉಪಯೋಗಿಸಬಹುದಲ್ಲ!






## ಪ್ರಾಮಿಸ್

ದಂತಕ್ಷಯವನ್ನು ತಡೆಗಟ್ಟಲು ನೆರವಾಗುತ್ತದೆ,
ಶ್ವಾಸದ ದುರ್ಗಂಧವನ್ನು ನಿವಾರಿಸಿ
ಬಾಯಿಯನ್ನು ಸ್ವಚ್ಛಗೊಳಿಸುತ್ತದೆ




3 ಬಲ್ಸಾರಾ ತಯಾರಿಕೆ

ಅಧಿಕ ಆರೋಗ್ಯವುಳ್ಳ ಹಲ್ಲು ಮತ್ತು ಒಸಡುಗಳು,
ಆಹ್ಲಾದಕರ ಶ್ವಾಸ—
ಅದಕ್ಕಾಗಿ ಪ್ರಾಮಿಸ್

CHAITRA-BLS-463 KAN

**ಮೂಲ: ಸಾಮರ್‌ಸೆಟ್ ಮಾಮ್**　　**ಕನ್ನಡಕ್ಕೆ: ವಿ. ಎನ್. ಹೆಗಡೆ**

ನನ್ನ ಹೆಂಡತಿ ಯಾವಾಗಲೂ ಅನಿಯಮಿತತೆಯನ್ನು ಬಯಸುವವಳು. ಇದನ್ನು ನಾನು ತಿಳಿದಿರುವುದರಿಂದಲೇ ಕ್ಲಾರಿಜ್ ಹೋಟೆಲಿನಲ್ಲಿ ಏರ್ಪಡಿಸಿದ (ಅವಳೊಂದಿಗಿನ) ಊಟಕ್ಕೆ ವೇಳೆಗೆ ಸರಿಯಾಗಿ ಆಕೆ ಬಾರದಿದ್ದಾಗ ನನಗೇನೂ ಆಶ್ಚರ್ಯವೆನಿಸಲಿಲ್ಲ. ಕಾಕ್‌ಟೇಲ್ ಆರ್ಡರ್ ಮಾಡಿ ನಾನು ಕುಳಿತಿದ್ದೆ. ಎರಡು ಮೂರು ಟೇಬಲ್ಲುಗಳನ್ನುಳಿದು ಗಿರಾಕಿಗಳಿಂದ ಹೋಟೆಲ್ ತುಂಬಿ ಹೋಗಿತ್ತು. ಉಲ್ಲಸಿತ ಸ್ತ್ರೀಯರು ಸರಸ ಸೊಗಸಿನ ಪುರುಷರು ಒಳ್ಳೆ ಉಡುಪು ಧರಿಸಿ ಸಂತೋಷದ ಲಹರಿಯಲ್ಲಿದ್ದರು. ಆ ಜನರಲ್ಲಿ ನನ್ನೊಡನೆ ಅರ್ಧ ಗಂಟೆ ಕಳೆಯಲು ಒಬ್ಬನೂ ನನಗೆ ಸಿಗಲಿಲ್ಲ. ಮಧ್ಯಾಹ್ನದ ಎರಡು ಗಂಟೆಯಾದ್ದರಿಂದ ಹೊಟ್ಟೆ ಹಸಿವೆಯಿಂದ ಚುರುಗುಡುತ್ತಿತ್ತು. ತಾನು ಇಂದ್ರನೀಲವನ್ನಾಗಲಿ, ಕೈಗಡಿಯಾರವನ್ನಾಗಲಿ ಧರಿಸುವುದಿಲ್ಲವೆಂದು ನನ್ನ ಹೆಂಡತಿ ಹೇಳುತ್ತಾಳೆ. ಅವಕ್ಕೆ ಅವಳು ಕೊಡುವ ಕಾರಣ ಇಷ್ಟೆ. ಇಂದ್ರನೀಲ ಬರಬರುತ್ತ ಹಸಿರು ಬಣ್ಣಕ್ಕೆ ತಿರುಗುತ್ತದೆ. ಗಡಿಯಾರ ಓಟ ನಿಲ್ಲಿಸುತ್ತದೆ. ಅವಳ ಪಾಲಿಗೆ ಇವೆಲ್ಲ ವಿಧಿವಿಲಾಸಗಳೇ. ಇಂದ್ರನೀಲದ ವಿಷಯ ಏನೇ ಇದ್ದರೂ ಆಕೆ ಕೀಲಿ ಕೊಟ್ಟಿದ್ದಾದರೆ ವಾಚು ನಡೆಯಬಹುದಿತ್ತೆಂದು ನನಗನ್ನಿಸುತ್ತದೆ. ಹೀಗೆಲ್ಲ ಮನಸ್ಸು ಹರಿದಾಡುತ್ತಿರುವಾಗಲೇ ಹೋಟೆಲ್ಲಿನ ಮಾಣಿ ಬಂದು ಸ್ವಾಮಿ, "ಈಗಷ್ಟೇ ಭಗಿನಿಯೊಬ್ಬಳ ಫೋನು ಬಂದಿತ್ತು. ತನಗೇನೋ ಅಸ್ವಾಸ್ಥ್ಯವಾದ್ದರಿಂದ ನಿಮ್ಮೊಡನೆ ಊಟಕ್ಕೆ ಬರೋಕೆ ಆಗೋಲ್ಲವಂತೆ," ಎಂದು ಹೇಳಿ ಹೋದ.

ನಾನು ಪೇಚಿನಲ್ಲಿ ಸಿಕ್ಕೆ. ಆ ಕಿಕ್ಕಿರಿದ ಹೋಟೆಲಿನಲ್ಲಿ ಒಂಟಿಯಾಗಿ ಕುಳಿತು ಊಟ ಮಾಡುವುದೇ? ಮನಸ್ಸಿನಲ್ಲಿ ತುಂಬಿಕೊಂಡಿದ್ದ ಮಜಾ ಹಾರಿಹೋಯಿತು. ಆದರೆ ಕ್ಲಬ್ಬಿಗೆ ಹೋಗಲು ವೇಳೆಯಾದ್ದರಿಂದ ಅಲ್ಲಿಯೇ ಊಟ ಮಾಡಲು ನಿರ್ಣಯಿಸಿದೆ. ಊಟದ ಕೋಣೆಯಲ್ಲಿ ಸ್ಥಳ ಹುಡುಕುತ್ತಿರುವಾಗಲೇ ಯಾವುದೋ ಪರಿಚಿತ ಮುಖ ಕಣ್ಣಿಗೆ ಬಿತ್ತು. ನನ್ನನ್ನು ನೋಡಿ ನಕ್ಕ ಆಕೆ...ಎಲಿಝಬೆತ್ ವರ್‌ಮೊಂಟ್. ಆಕೆಯ ಬದಿಯಲ್ಲಿ ಖಾಲಿ ಇದ್ದ ಖುರ್ಚಿಯಲ್ಲಿ ಕೂಡ್ರಬಯಸಿ, "ಬಹಳ ಹಸಿದಿದ್ದೇನೆ. ದಯವಿಟ್ಟು ನಿನ್ನೊಡನೆ ಊಟಕ್ಕೆ ಕುಳಿತುಕೊಳ್ಳಲು ಅನುಮತಿಸುವಿಯಾ?" ಎಂದೆ.

"ಓಹ್ ಅದಕ್ಕೇನು? ಆದರೆ ನನ್ನ ಊಟ ಮುಗಿಯುತ್ತ ಬಂದಿದೆ."

ಅವಳೊಡನೆ ಆ ಜನಜಂಗುಳಿಯಲ್ಲಿಯೂ ನಾನು ಏಕಾಂತ ಅನುಭವಿಸಿದೆ.

"ನಿಜವಾಗಿಯೂ ಇದೊಂದು ಅದೃಷ್ಟವೇ ನಾನು ಹಸಿವೆಯಿಂದ ಎಚ್ಚರತಪ್ಪುವುದರಲ್ಲಿದ್ದೆ," ಎಂದೆ ನಾನು.

ಅವಳ ನಗೆ ಮನೋಹರವಾಗಿತ್ತು. ನಿಧಾನವಾಗಿ ಇಡೀ ಮುಖವನ್ನು ಆವರಿಸಿ ಅವಳಿಗೊಂದು ಅನನ್ಯ ಆಕರ್ಷಣೆ ಉಂಟುಮಾಡುತ್ತಿತ್ತು. ತುಟಿಗಳ ಮೇಲೆ ಅನುಮಾನಿಸುತ್ತ ತಂಗಿದ ನಗೆ ಮೆಲ್ಲನೆ ಆಕೆಯ ಮಿನುಗುವ ಕಣ್ಣುಗಳಿಗೆ ಆವರಿಸಿ ಅಲ್ಲಿಯೇ ಪ್ರಿಯವಾಗಿ ಬೀಡು ಬಿಡುತ್ತಿತ್ತು. ತಾರುಣ್ಯದಲ್ಲಿ ಆಕೆ ಹೇಗಿದ್ದಳೋ ಏನೋ. ಆದರೆ ಅವಳು ಚೆಲುವೆಯಾಗಿದ್ದಳೆಂದು ಜನರು ಹೇಳುವುದನ್ನು ನಂಬಬಹುದಾಗಿತ್ತು. ಈಗ ಐವತ್ತರ ಹೊಸ್ತಿಲಲ್ಲೂ ಆಕೆ ಅನುಪಮ ಸುಂದರಿ. ಬಹು ಸ್ತ್ರೀಯರು ಕಾಂತಿವರ್ಧಕಗಳನ್ನು ಲೇಪಿಸಿಕೊಂಡು ತಮ್ಮ ಸಹಜ ಸೌಂದರ್ಯವನ್ನು ಕೆಡಿಸಿಕೊಳ್ಳುತ್ತಾರೆ. ಆದರೆ ಎಲಿಝಬೆತ್ ಅಂಥವಳಲ್ಲ. ಅವಳು ಕಾಂತಿವರ್ಧಕ ಲೇಪಿಸುವುದು ನಿಸರ್ಗದ ಅನುಕರಣೆಗಾಗಿಯಲ್ಲ. ಅದರ ಸುಧಾರಣೆಗಾಗಿ.

ಆವಳು ಬಳಸಿದ ಸಾಧನಗಳನ್ನು ಪ್ರಶ್ನಿಸದೆ ನೀವು ಪರಿಣಾಮವನ್ನು ಹೊಗಳಬಲ್ಲಿರಿ. ತನ್ನ ಲೇಪನಕೌಶಲದಲ್ಲಿಯೇ ಆಕೆ ಮುಖಲಕ್ಷಣವನ್ನು ದ್ವಿಗುಣಗೊಳಿಸುತ್ತಾಳೆ. ತೆಳ್ಳನೆ ದೇಹದ ಸಾದಾ ಉಡುಪಿನ ಎಲಿಝಾಬೆತ್ಳ ಕೊರಳಲ್ಲಿ ಒಂದು ಮುತ್ತಿನ ಸರವಿತ್ತು. ಮದುವೆ ಉಂಗುರವನ್ನು ರಕ್ಷಿಸುತ್ತಿದ್ದ ಪಚ್ಚದ ಹರಳಿನ ಮಬ್ಬು ಹೊಳಪು **ಆಕೆಯ** ಕೈಯ ಬಿಳುಪನ್ನು ಒಡೆದೆದ್ದು ಕಾಣುವಂತೆ ಮಾಡಿತ್ತು.

ಎಲಿಝಾಬೆತ್ ಸೇಂಟ್ ಎರ್ವಿನ್ ಹಳೆಯ ಪತ್ರಿಕನ ಮಗಳು. ಹದಿನೆಂಟರ ಹರೆಯದಲ್ಲಿಯೇ ಶ್ರೀಮಂತನೊಬ್ಬನನ್ನು ಮದುವೆಯಾಗಿ ದುಂದುಗಾರಿಕೆಯ ಕಾಮುಕ ಜೀವನ ಪ್ರಾರಂಭಿಸಿದಳು. ವಿವೇಕ ಕೆಡುವಷ್ಟು ಗರ್ವ ಪರಿಣಾಮ ಊಹಿಸದಷ್ಟು ದುಡುಕು ಸ್ವಭಾವದವಳಾಗಿದ್ದಳು. ಎರಡು ವರ್ಷದೊಳಗಾಗಿ ಗಂಡ, ಅವಳಿಂದ ವಿವಾಹ ವಿಚ್ಛೇದನ ಪಡೆದ. ನಂತರ ಆ ಪ್ರಕರಣದಲ್ಲಿ ಹೆಸರಿಸಿದ ಸಹ-ಪ್ರತಿವಾದಿಗಳಲ್ಲಿ ಒಬ್ಬನನ್ನು ಮದುವೆಯಾಗಿ ಹದಿನೆಂಟು ತಿಂಗಳ ನಂತರ ಅವನನ್ನೂ ಬಿಟ್ಟು ಓಡಿಹೋದಳು. ನಂತರದ ದಿನಗಳಲ್ಲಿ ಹಪಾಪಿ ಗಂಡುಗಳ ಹಿಂಡೇ ಅವಳನ್ನು ಹಿಂಬಾಲಿಸಿತು. ವ್ಯಭಿಚಾರಕ್ಕೆ ಆಕೆ ಮನೆಮಾತಾದಳು. ಅವಳ ಹೆಸರೆತ್ತಿದೊಡನೆ ಮರ್ಯಾದಸ್ಥರೆಲ್ಲ ಮೂಗು ಮುರಿಯುವಂತಾಯಿತು. ಪ್ರೇಮಿಗಳಿಗೆಲ್ಲ ದ್ರೋಹವೆಸಗಿದರೂ ಆ ಜೂಜುಕೋರ ಸ್ವೈರ ಸ್ತ್ರೀ ತನ್ನ ಕೆಲವು ಗೆಳೆಯರ ಪ್ರಶಂಸೆಗೆ ಇನ್ನೂ ಪಾತ್ರಳಾಗಿಯೇ ಇದ್ದಳು. ತೀವ್ರ ಚೈತನ್ಯದ ದಿಟ್ಟ ಎಲಿಝಾಬೆತ್ ಸರಳ ಬುದ್ಧಿಯವಳಾಗಿದ್ದಳು. ಡಂಭಾಚಾರವನ್ನು ಆಕೆ ಕಂಡರಿಯದ ಉದಾರಿ, ಪ್ರಾಮಾಣಿಕಳು. ಈ ಅವಧಿಯಲ್ಲಿಯೇ ನಾನವಳನ್ನು ಮೊದಲು ನೋಡಿದ್ದು. ಅವಳ ಗುಣ ನನಗೆ ಮೆಚ್ಚಿಗೆಯಾಯಿತು. ಕಂಡದ್ದನ್ನು ಕಂಡಹಾಗೆಯೇ ಆಡುವ ಆಕೆಯ ಮಾತಿನಲ್ಲಿ ಚಮತ್ಕಾರವಿತ್ತು. ತನ್ನ ಮಲಿನವಾದ ಗತಜೀವನದ ಬಗ್ಗೆ ವಿನೋದವಾಗಿ ಮಾತಾಡಲು ಆಕೆ ಹಿಂಜರಿಯುತ್ತಿರಲಿಲ್ಲ.

ತನ್ನ ನಲವತ್ತರಲ್ಲಿ ಇಪ್ಪತ್ತೈದರ ಹರೆಯದ ಯುವಕನನ್ನು ಆಕೆ ಮದುವೆಯಾದದ್ದು ಒಂದು ಆಶ್ಚರ್ಯಕರ ಘಟನೆ. ಇದೊಂದು ಹುಚ್ಚಾಟ. ಆ ಸುಂದರ ತರುಣನ ಅನನುಭವದ ದುರ್ಲಾಭ ಪಡೆಯುವುದು ಮರ್ಯಾದೆಗೇಡು ಎಂದು ಅವಳ ಮಿತ್ರರ ಅಭಿಪ್ರಾಯವಾಗಿತ್ತು. ಅಂತೆಯೇ ಈ ವರೆಗೆ ಅವಳಿಗೆ ಜೊತೆ ಇದ್ದ ಎಲ್ಲರೂ ಅವಳನ್ನು ಬಿಟ್ಟರು. ಬರಲಿರುವ ದುರ್ದಿನಗಳ ಭವಿಷ್ಯ ಅವರ ಬಾಯಿಯಿಂದ ಕೇಳಿಬಂತು. "ಎಲಿಝಾಬೆತ್ ಆರು ತಿಂಗಳಿಗಿಂತ ಹೆಚ್ಚು ಕಾಲ ಒಬ್ಬನನ್ನೇ ಮೆಚ್ಚಿರುವವಳಲ್ಲ" ಎಂಬುದು ಎಲ್ಲರ ತಿಳುವಳಿಕೆಯಾಗಿತ್ತು. ಆ ತರುಣನಿಗೆ ಹಾಗೆಯೇ ಆಗಿ, ಈ ದುಷ್ಟ ಸ್ತ್ರೀಯಿಂದ ಮುಕ್ತಿ ಸಿಗಲೆಂದು ಅವರು ಹಾರೈಸಿದರು. ಆದರೆ ಅವರ ನಿರೀಕ್ಷೆ ಸುಳ್ಳಾಯಿತು. ಅವಳಲ್ಲಿ ಅನಿರೀಕ್ಷಿತ ಬದಲಾವಣೆಯಾಗಿತ್ತು. ಕಾಲ ಪ್ರಭಾವದಿಂದಲೋ ತರುಣ ಗಂಡ ಪೀಟರನ ಮುಗ್ಧ ಪ್ರೀತಿಯಿಂದಲೋ ಆಕೆ ಅವನ ಮೆಚ್ಚುಗೆಯ ಸಂಗಾತಿಯಾದಳು. ತನ್ನೆಲ್ಲ ವಿಲಾಸ ಬಿಟ್ಟು ಅವಳು ಗಂಡನ ಸುಖವನ್ನೇ ಕುರಿತು ಚಿಂತಿಸಹತ್ತಿದಳು. ಈಗ ಎಲ್ಲರ ಬಾಯಿ ಮುಚ್ಚಿತು. ಹೀಗೆಯೇ ಬಹುಕಾಲ ಗೌರವಾನ್ವಿತ ಜೀವನ ನಡೆಸಿದಲ್ಲಿ ಅವಳ ಕಾಮಾಸಕ್ತ ಭೂತಕಾಲವೆಲ್ಲ ಜನರ ನೆನಪಿನಿಂದ ಸಂಪೂರ್ಣ ಅಳಿದುಹೋಗಬಹುದೆಂದು ನಾನು ಭಾವಿಸಿದ್ದೆ.

ಆದರೆ ಕಣ್ಣು ಮಿಟುಕಿಸುವುದರಲ್ಲಿಯೇ ಪರಿಸ್ಥಿತಿ ಸಂಪೂರ್ಣ ಬದಲಾಗಿತ್ತು. ಪೀಟರ್ ವರ್ಮೊಂಟ್ ಹತ್ತು ವರ್ಷಗಳ ಸುಖೀ ದಾಂಪತ್ಯ ಜೀವನದ ನಂತರ ಬಾರ್ಬರಾ ಕ್ಯಾಂಟನ್ ಎಂಬ ಹುಡುಗಿಯಲ್ಲಿ ಅನುರಕ್ತನಾದ. ಹಿಂದೊಮ್ಮೆ ವಿದೇಶ ವ್ಯವಹಾರ ಇಲಾಖೆಯಲ್ಲಿ ಉಪ ಕಾರ್ಯದರ್ಶಿಯಾಗಿದ್ದ ಲಾರ್ಡ್ ರಾಬರ್ಟ್ ಕ್ಯಾಂಟನ್ನನ ಮಗಳು ಆಕೆ. ಒಳ್ಳೆಯ ಹುಡುಗಿ... ಎಲ್ಲರಿಗೂ ನಡೆದ ವಿಷಯ ಗೊತ್ತಿತ್ತು. ಆದರೆ ಎಲಿಝಾಬೆತ್ಳಿಗೆ ಇದರ ಸುಳಿವು ಹತ್ತಿ ತಾನೆಂದೂ ಅನುಭವಿಸಿರದ ಇಂಥ ಪರಿಸ್ಥಿತಿಯನ್ನು ಅವಳು ಹೇಗೆ ಎದುರಿಸಿದಳೆಂಬ ವಿಷಯ ಎಲ್ಲರಿಗೆ

ಗಳನ್ನು ಅವಳೇ ತಿರಸ್ಕರಿಸಿದ್ದಳೇ ವಿನಾ ಅವರಿಂದ ಆಕೆ ತಿರಸ್ಕರಿಸಲ್ಪಟ್ಟವಳಲ್ಲ. ಅವಳ ಧೈರ್ಯ ಮತ್ತು ಚಾಣಾಕ್ಷತನಗಳ ಪರಿಚಯವಿದ್ದ ನಾನು ಆಕೆ ಬಾರ್ಬರಾಳನ್ನು ಕೂಡಲೇ ತೊಡೆದು ಹಾಕುವಳೆಂದು ಭಾವಿಸಿದ್ದೆ. ಊಟ ಮಾಡುತ್ತಿದ್ದಂತೆ ಈ ಎಲ್ಲ ಹಳೆಯ ಘಟನೆಗಳ ಸುರುಳಿ ನನ್ನ ಮನಸ್ಸಿನಲ್ಲಿ ಬಿಚ್ಚಿತ್ತು. ಅವಳನ್ನು ನೋಡಿದರೆ ಯಾವುದೇ ರೀತಿಯಿಂದ ಅವಳು ಕಳವಳಕ್ಕೆ ಒಳಗಾಗಿದ್ದಾಳೆಂದು ಹೇಳುವಂತಿರಲಿಲ್ಲ. ಹಲವಾರು ವಿಷಯಗಳನ್ನು ಕುರಿತು ತಮಾಷೆಯಿಂದ ಆಕೆ ಹರಟಿದಳು. ಯಾವುದೋ ಒಂದು ಪವಾಡದಿಂದ ಪೀಟರನ ಬದಲಾದ ಭಾವನೆಗಳ ಅರಿವು ಅವಳಿಗಾಗಿಲ್ಲ ಎಂದು ನಾನೆಂದುಕೊಂಡೆ. ತಾನು ಅವನನ್ನು ಪ್ರೇಮಿಸಿದಷ್ಟು ಗಾಢವಾಗಿ ಆತ ತನ್ನನ್ನು ಪ್ರೇಮಿಸಿರಲಿಕ್ಕಿಲ್ಲವೆಂದು ಅನುಮಾನಿಸಲೂ ಆಗದಷ್ಟು ಆಕೆ ಪ್ರೇಮಾಂಧಳಾಗಿದ್ದಳು.

ಕಾಫಿ, ಸಿಗರೇಟು ಸೇವನೆ ಮುಗಿದ ಮೇಲೆ "ವೇಳೆ ಎಷ್ಟು?" ಎಂದಾಕೆ ಕೇಳಿದಳು.

"ಮೂರೂ ಮುಕ್ಕಾಲು," ಎಂದೆ.

"ಇನ್ನು ನಾನು ನನ್ನ ಬಿಲ್ ಕೊಟ್ಟು ಹೊರಡಬೇಕು."

"ನಿನ್ನ ಹಣವನ್ನು ನಾನೇ ಕೊಟ್ಟರಾಗದೇ?"

"ಪರವಾಯಿಲ್ಲ," ಆಕೆ ನಕ್ಕಳು.

"ಏನು ಬಹಳ ಆವಸರದಲ್ಲಿದ್ದಂತಿದೆ?"

"ಮೂರಕ್ಕೆ ಪೀಟರನನ್ನು ಕಾಣಬೇಕಿತ್ತು, ಅಷ್ಟೆ."

"ಪೀಟರ್ ಹೇಗಿದ್ದಾನೆ?"

"ಸೌಖ್ಯವಾಗಿಯೇ ಇದ್ದಾನಲ್ಲ..."

ಆಕೆ ಮೆಲುನಗೆ ನಕ್ಕಳು. ಅದರಲ್ಲೇನೋ ಚೇಷ್ಟೆ ಇತ್ತು. ಕ್ಷಣಕಾಲ ಅನುಮಾನಿಸುತ್ತ ಅವಳು ಬುದ್ಧಿಪೂರ್ವಕ ನನ್ನೆಡೆ ನೋಡಿದಳು.

"ಕುತೂಹಲದ ಸಂಗತಿಗಳು ನಿಮಗೆ ಮೆಚ್ಚುಗೆಯಲ್ಲವೇ?" ಎಂದು ಕೇಳಿ, "ನಾನೀಗ ಎಲ್ಲಿಗೆ ಹೋಗುತ್ತೇನೆ ಎಂದು ನೀವು ಊಹಿಸಲಾರಿರಿ. ಇಂದು ಬೆಳಿಗ್ಗೆ ಪೀಟರನಿಗೆ ಫೋನ್ ಮಾಡಿ ಮೂರು ಗಂಟೆಗೆ ಭೇಟಿಯಾಗಲು ಹೇಳಿದ್ದೇನೆ. ನನ್ನನ್ನು ಡೈವೋರ್ಸ್ ಮಾಡೆಂದು ಅವನಿಗೆ ನಾನಿಂದು ಹೇಳುತ್ತೇನೆ."

"ನಾನಿದನ್ನು ನಂಬಲಾರೆ." ಒಮ್ಮೆಲೆ ನಾನು ಕೂಗಿದೆ. ಏನು ಹೇಳಬೇಕೆಂದೇ ನನಗೆ ತೋಚಲಿಲ್ಲ.

"ನೀವಿಬ್ಬರೂ ಎಷ್ಟು ಅನ್ಯೋನ್ಯವಾಗಿದ್ದಿರಿ?"

"ಜಗತ್ತಿಗೇ ತಿಳಿದ ಪೀಟರನ ವಿಷಯ ನನಗೆ ಗೊತ್ತಿಲ್ಲ ಎಂದು ನಿಮ್ಮ ಭಾವನೆಯೇ? ನಾನು ಅಷ್ಟೊಂದು ಮೂರ್ಖಳಲ್ಲ."

ಎಲಿಜಬೆತ್ತಳು ನಿಜವನ್ನು ನಂಬುವಂತೆ ಹೇಳಲು ನನ್ನಿಂದಾಗುತ್ತಿರಲಿಲ್ಲ. ಅವಳು ಹೇಳಿದ್ದು ನನಗೆ ತಿಳಿಯಲಿಲ್ಲವೆಂಬಂತೆ ನಟಿಸಲೂ ಆಗಲಿಲ್ಲ. ನಾನು ಸುಮ್ಮನಾಗಲೇಬೇಕಾಯಿತು.

"ಪೀಟರ್ ನಿನ್ನನ್ನು ಡೈವೋರ್ಸ್ ಮಾಡಲೆಂಬ ಹಟ ನಿನಗೇಕೆ?" ನಾನು ಕೇಳಿದೆ.

"ಬಾರ್ಬರಾಳ ತಂದೆ ರಾಬರ್ಟ್ ಕ್ಯಾಂಟನ್ ಒಬ್ಬ ನಿರುಪಯೋಗಿ ಮುದುಕ. ನಾನೇ ಡೈವೋರ್ಸ್ ಕೊಟ್ಟರೆ ಬಾರ್ಬರಾ ಪೀಟರನನ್ನು ಮದುವೆಯಾಗಲು ಈ ಮುದುಕ ಅನುಮತಿಸಲಿಕ್ಕಿಲ್ಲ. ಇನ್ನು ನನ್ನ ಮಟ್ಟಿಗೆ ಇಂಥ ಡೈವೋರ್ಸ್ ಏನು ಮಹಾ? ಹತ್ತರ ಜೊತೆ ಹನ್ನೊಂದು..." ಎಂದಾಕೆ ನಕ್ಕಳು.

"ಪೀಟರ್ ಆಕೆಯನ್ನು ಮದುವೆಯಾಗುತ್ತಾನೆಂದು ಹೇಗೆ ಹೇಳುವಿ?"



# ತೆರೆಮರೆಯ ಸಮರ

ಸದಾನಂದ ಕನವಳ್ಳಿ

---

ಮಾಸ್ಕೋ ಒಲಿಂಪಿಕ್ಸ್ ಕ್ರೀಡೆಗಳನ್ನು ಅಮೇರಿಕದಲ್ಲಿ ದೂರದರ್ಶನದಲ್ಲಿ ಪ್ರಸಾರ ಮಾಡುವ ಹಕ್ಕಿಗಾಗಿ ಮೂರು ಪ್ರಖ್ಯಾತ ದೂರದರ್ಶನ ಕಂಪನಿಗಳಲ್ಲಿ ಒಂದು ದೃಷ್ಟಿಯ 'ಯುದ್ಧ'ವೇ ನಡೆಯಿತು. ಆ ಯುದ್ಧದ ಅಂತರಂಗದಲ್ಲೊಂದು ನೋಟವಿದು.

---

ಒಲಿಂಪಿಕ್ಸ್ ಏರ್ಪಾಟಿನ ಅವಕಾಶಕ್ಕಾಗಿ ಪೈಪೋಟಿಯು ಒಂದು ಸುತ್ತು ಮುಗಿಯುತ್ತಿದ್ದಂತೆಯೆ ಎರಡನೆಯದು ಆರಂಭ. ಈಗ ಮಾಸ್ಕೊ ಒಲಿಂಪಿಕ್ಸನ್ನು ದೂರದರ್ಶನದ ಮೂಲಕ ಚಿತ್ರಿಸುವ ಹಕ್ಕಿಗಾಗಿ ಅಮೇರಿಕದ ಮೂರು ಬೃಹತ್ ದೂರದರ್ಶನ ಜಾಲಗಳ ಮಧ್ಯೆ ಹಣಾಹಣಿ. ಎನ್. ಬಿ. ಸಿ. (ನ್ಯಾಷನಲ್ ಬ್ರಾಡ್‌ಕಾಸ್ಟಿಂಗ್ ಕಂಪನಿ), ಸಿ. ಬಿ. ಎಸ್. (ಕೊಲಂಬಿಯ ಬ್ರಾಡ್‌ಕಾಸ್ಟಿಂಗ್ ಸಿಸ್ಟಮ್) ಮತ್ತು ಎ. ಬಿ. ಸಿ. (ಅಮೇರಿಕನ್ ಬ್ರಾಡ್ ಕಾಸ್ಟಿಂಗ್ ಕಂಪನಿ) ಇವು ಮೂರರಲ್ಲಿ ಯಾವುದಕ್ಕೆ ಮಾಸ್ಕೊ ಒಲಿಂಪಿಕ್ಸನ್ನು ಅಮೇರಿಕದಲ್ಲಿ ಗೃಹಮನೋರಂಜನೆಯ ಹದಿನೇಳು ಅಂಗುಲ ಪರದೆಯ ಮೇಲೆ ಪ್ರದರ್ಶಿಸುವ ಹಕ್ಕು ಲಭಿಸುವುದೆಂಬುದು ಮುಖ್ಯ ಪ್ರಶ್ನೆಯಾಗಿತ್ತು. ಹಾಗೆ ನೋಡಿದರೆ ಹೋರಾಟವಿದ್ದುದು ಇವು ಮೂರರ ಮಧ್ಯೆಯಲ್ಲ. ಅದಿದ್ದುದು ದೂರದರ್ಶನದ ಹಕ್ಕನ್ನು ಕೊಳ್ಳಬಯಸಿದ್ದ ಇವು ಮೂರು ಮತ್ತು ಅದನ್ನು ಮಾರಲಿದ್ದ ರಶ್ಯನ್ ಅಧಿಕಾರಿಗಳ ಮಧ್ಯೆ. ಅದೊಂದು ಸುದೀರ್ಘ ಸಮರ. ಮೂರು ವರ್ಷದ ದಾಳಿ. ಪ್ರತಿಷ್ಠೆ ಪಣಕ್ಕಿತ್ತು. ಪ್ರತಿ ಜಾಲವೂ ತಪ್ಪು ಎಸಗಿತು, ಎಡವಿತು. ಆದರೆ ಕೊನೆಗೆ ಉಪಾಯದಿಂದಲೊ ಅದೃಷ್ಟದಿಂದಲೋ ಎನ್. ಬಿ. ಸಿ. ಯಶಸ್ವಿಯಾಯಿತು.

೧೯೮೦ ರ ಒಲಿಂಪಿಕ್ಸ್ ಮಾಸ್ಕೋದಲ್ಲಿ ಜರುಗುವುದೆಂದು ಘೋಷಿತವಾದುದೇ ತಡ, ಮೂರೂ ದೂರದರ್ಶನ ಜಾಲಗಳ ಪ್ರತಿನಿಧಿಗಳು ರಶ್ಯನ್ನರಿಗೆ ಅಭಿನಂದನೆ ನೀಡಲು ಧಾವಿಸಿದರು. ಅದು ಶಿಷ್ಟಾಚಾರ ಮಾತ್ರವಾಗಿರದೆ "ನಿಮಗೆ ಶುಭವಾಗಲಿ, ನಾವು ಶೀಘ್ರ ನಿಮ್ಮನ್ನು ಭೇಟಿಯಾಗುತ್ತೇವೆ" ಎಂಬ ಸೂಚನೆಯೂ ಆಗಿತ್ತು. ಮುಂದಿನ ಮೂರು ವರ್ಷ ಈ ಮೂರು ಹಣವಂತ ಸಂಸ್ಥೆಗಳು ರಶ್ಯದ ಅತ್ಯಂತ ಧೂರ್ತ ರಾಜಕಾರಣಿಗಳೊಂದಿಗೆ ವ್ಯವಹರಿಸಬೇಕಿತ್ತು. ರಶ್ಯದ ಪ್ರತಿನಿಧಿಗಳಾದರೊ ಸ್ಟಾಲಿನ್ ಮತ್ತು ಕ್ರುಶ್ಚೇವರ ಶುದ್ಧೀಕರಣ ಚಳುವಳಿಗಳಿಂದ ನುಸುಳಿಕೊಂಡು ಸೋವಿಯತ್ ಸರಕಾರದಲ್ಲಿ ಉನ್ನತ ಅಧಿಕಾರಕ್ಕೇರಿದ ಚಾಣಾಕ್ಷರು.

ಪೇಲಿ ಮತ್ತು ವಸ್ಲರ್ ಮಾತುಕತೆ ನಡೆಸುತ್ತಿರುವಾಗ ರಶ್ಯದಲ್ಲಿದ್ದರೆಂದು ನ್ಯೂಯಾರ್ಕ್ ಟೈಮ್ಸ್ ವರದಿ ಪ್ರಕಟಿಸಿತು. ಅಮೇರಿಕನ್ ದೂರದರ್ಶನದ ಪಿತೃವಾಗಿದ್ದ ಪೇಲಿ ಸಿಡುಕಿನ ನೋವಿಕೋವನನ್ನು ಭೇಟಿ ಮಾಡಿದ. ಇಬ್ಬರೂ ಪರಸ್ಪರ ಗೌರವ ತೋರಿದರು. ಪೇಲಿಯ್ನು ಆಗ ಮನಕ್ಕಿಂತ ಮುಂಚೆ ಅವನ ಖ್ಯಾತಿ ಮಾಸ್ಕೊ ತಲುಪಿತ್ತು. ಸಿ.ಬಿ.ಎಸ್. ಮಾಸ್ಕೋ ಓಲಿಂಪಿಕ್ಸಿನ ದೂರದರ್ಶನ ಹಕ್ಕು ಪಡೆಯುವದೆಂಬ ಅಲಿಖಿತ ಒಪ್ಪಂದದೊಂದಿಗೆ ಇಬ್ಬರೂ ಒಬ್ಬರನ್ನೊಬ್ಬರು ಬೀಳ್ಕೊಟ್ಟರು. ಆದರೆ ಮೂರು ದಿನಗಳ ತರುವಾಯ ವಸ್ಲರನಿಗೆ ಇನ್ನೊಂದು ಪೇಚು ಎದುರಾಯಿತು. ರಶ್ಯನ್ನರು ಕೆಲವು ಅಸಾಧ್ಯ ಕರಾರುಗಳನ್ನು ವಿಧಿಸಿ ಕಾಗದ ಬರೆದಿದ್ದರು. ಸಿ. ಬಿ. ಎಸ್. ದೂರದರ್ಶನ ಹಕ್ಕು ಪಡೆಯುವುದೆಂದು ಹೇಳಲಾದುದು ಇದು ಎರಡನೆಯ ಬಾರಿ. ಅದನ್ನು ದಾರಿ ತಪ್ಪಿಸಿದುದೂ ಇದು ಎರಡನೆಯ ಬಾರಿ. ಸಿ. ಬಿ. ಎಸ್. ವಲಯಗಳಲ್ಲಿ ಅಪನಂಬಿಕೆಯ ಬೀಜ ಮೊಳಕೆಯೊಡೆಯಲಾರಂಭಿಸಿದ್ದವು.

ಡಿಸೆಂಬರ್ ೧೫, ೧೯೭೬ ರಂದು ಮೂರೂ ದೂರದರ್ಶನ ಪರಿವಾರಗಳು ಸಂಭವಿಸಲಿದ್ದುದರ ಕಲ್ಪನೆಯಿಲ್ಲದೇ ಮಾಸ್ಕೋದಲ್ಲಿ ಬಂದಿಳಿದವು. ರಶ್ಯ ವಿಸ್ಮಯದ ಇನ್ನೊಂದು ಆಶ್ಚರ್ಯಕ್ಕಾಗಿ ಅವರು ಹೆಚ್ಚು ಕಾಯಬೇಕಿರಲಿಲ್ಲ. ದೂರದರ್ಶನ

---

**ಮಾ**ಸ್ಕೊ ಓಲಿಂಪಿಕ್ಸಿನ ದೂರದರ್ಶನ ಹಕ್ಕಿಗಾಗಿ ನಡೆದ ಮಾತುಕತೆಗಳಲ್ಲಿ ಎಲ್ಲ ಜಾಲಗಳ ಅತಿರಥ ಮಹಾರಥಿಗಳು ರೇಗಾಡಿ, ತಮ್ಮ 'ಡಾಲರುಸ್ನಾಯು'ಗಳನ್ನು ಕುಣಿಸಿ, ಪ್ರತಿಷ್ಠೆಯನ್ನು ಪಣಕ್ಕೆ ಹಚ್ಚಿ, ಸೋತು ಸಣ್ಣಾಗಿ ನಿಡುಸಿರು ಬಿಡುತ್ತಿರುವಾಗ ಅತ್ಯಂತ ಮಹತ್ವದ ಪಾತ್ರ ವಹಿಸಿ ವ್ಯವಹಾರ ಮುಗಿಸಿದವನು ಪಶ್ಚಿಮ ಜರ್ಮನಿಯ ಮನೋರಂಜನ ವ್ಯವಸ್ಥಾಪಕನಾದ ೨೮ ವರ್ಷದ ಲೋಥಾರ್ ಬಾಕ್ ಎಂಬ ವ್ಯಕ್ತಿ.

ಬಾಕ್ ೧೯೭೬ ರಲ್ಲಿ ಸಿ. ಬಿ. ಎಸ್. ನ ವಿಶೇಷ ಕಾರ್ಯಕ್ರಮ ಬೋಲ್ಷೊಯ್ ಬ್ಯಾಲೆಯಲ್ಲಿ ಸಲಹೆಗಾರನಾಗಿದ್ದ. ಆದರೆ ಓಲಿಂಪಿಕ್ಸಿನ ದೂರದರ್ಶನ ಹಕ್ಕಿನ ವ್ಯವಹಾರದಲ್ಲಿ ಅವನು ಪ್ರವೇಶಿಸಿದುದು ೧೯೭೬ ರ ಅಕ್ಟೋಬರ್ ನಂತರ. ಸಿ. ಬಿ. ಎಸ್. ನೊಂದಿಗೆ ಅವನ ಸಹವಾಸ ಅಲ್ಪಕಾಲ ಬಾಳಿತು. ಆದರೆ ಆ ಅಲ್ಪ ಕಾಲದಲ್ಲಿ ಅವನೇ ಅದರ ಹುಕುಮಿನ ಎಕ್ಕಾ ಆಗಿದ್ದ. "ಅವನು ರಶ್ಯನ್ನರೊಂದಿಗೆ ಉತ್ತಮ ಸಂಬಂಧ ಹೊಂದಿದ್ದಾನೆ. ಎಂತಲೆ ನಾವು ಅವನನ್ನು ನೇಮಿಸಿಕೊಂಡೆವು," ಎಂದು ಸಿ. ಬಿ. ಎಸ್. ನ ಅಧ್ಯಕ್ಷ ಜಾನ್ ಸ್ನೈಡರ್ ವಿವರಿಸಿದ.

ರಶ್ಯನರೊಂದಿಗೆ ಜರುಗಿದ ಗುಪ್ತ ಮಾತುಕತೆಗಳ ಕಾಲಕ್ಕೆ ಬಾಕನ ಬಗೆಗೆ ಹೆಚ್ಚು ಗೊತ್ತಿರಲಿಲ್ಲ. ಈಗ ಸಾಕಷ್ಟು ಮಾಹಿತಿ ಲಭ್ಯ. ಲೋಥಾರ್ ಬಾಕ್ ಮ್ಯೂನಿಕ್ಕಿನ ನಾಟಕ ನಿಯೋಗಿ. ಮಾಸ್ಕೊ ಓಲಿಂಪಿಕ್ಸ್‌ನ ದೂರದರ್ಶನ ಹಕ್ಕಿಗಾಗಿ ಮಾತುಕತೆ ಆರಂಭಿಸುವದಕ್ಕಿಂತ ಆರೂವರೆ ವರ್ಷ ಮೊದಲು ಅವನು ರಶ್ಯನ್ ಹಾಡುಗಾರರ ಪಶ್ಚಿಮ ಜರ್ಮನಿಯ ಪ್ರವಾಸ ಏರ್ಪಡಿಸಿದ್ದ. ಅದು ರಶ್ಯ ಜೆಕೊಸ್ಲೊವಾಕಿಯಾದ ಮೇಲೆ ಆಕ್ರಮಣವೆಸಗಿದ್ದ ಕಾಲ. ಜರ್ಮನಿಯಲ್ಲಿ ಯಾರೂ ರಶ್ಯನ್ ಕಲೆಗಳಿಗೆ ಆಶ್ರಯ ನೀಡುವ ಆಸಕ್ತಿ ಹೊಂದಿರದಿದ್ದ ಕಾಲವದು. ಆದುದರಿಂದ ಲೋಥಾರ್ ಬಾಕ್ ಸಂಪೂರ್ಣ ದಿವಾಳಿಯಾದ. ಅವನು ತನ್ನ ನಷ್ಟವನ್ನು ಸಮಾಧಾನಚಿತ್ತ

ಹಕ್ಕಿನ ಬೆಲೆಯಲ್ಲದೆ ರಶ್ಯನ್ನರು ಸೌಲಭ್ಯ ಸಲಕರಣೆಗಳಿಗಾಗಿ ಇನ್ನೂ ೫ ಕೋಟಿ ಡಾಲರು ಬೇಡಿದರು. ದುಡ್ಡಿಗಿಂತ ರಾಜಕೀಯ ಕಾರಣಗಳು ಆತಂಕಕಾರಿಯಾಗಿದ್ದವು. ರಶ್ಯನ್ನರು ಉತ್ಪಾದಿಸಲು ಸಾಧ್ಯವಿರದ ಸಂಕೀರ್ಣ ಸಂಪರ್ಕ ಸಲಕರಣೆಗಳನ್ನು ಮಾಸ್ಕೋದಲ್ಲಿ ಹಿಂದೆ ಬಿಟ್ಟು ಹೋಗುವುದು ಅಷ್ಟೊಂದು ಹಿತಕರವಿಚಾರವಾಗಿರಲಿಲ್ಲ. ಅಷ್ಟಿ ಇದೊಂದೇ ಆಗಿರಲಿಲ್ಲ, ರಶ್ಯದ ಪ್ರಚಾರ ಮಾಡುವ ಕಾರ್ಯಕ್ರಮಗಳನ್ನು ಬಿತ್ತರಿಸಬೇಕೆಂಬ ಕರಾರನ್ನೂ ಜೋಡಿಸಲಾಗಿತ್ತು. ಯಾವದೇ ಅಮೇರಿಕನ್ ಪ್ರಸಾರ ಮಾಧ್ಯಮಕ್ಕೆ ಇದು ನುಂಗಲಾರದ ತುತ್ತು. ಅದರೂ ಎ. ಬಿ. ಸಿ. ೧೯೭೫ ರಿಂದಲೆ ರಶ್ಯ ಪರ ಕಾರ್ಯಕ್ರಮಗಳನ್ನು ಬಿತ್ತರಿಸಲಾರಂಭಿಸಿತ್ತು, ೧೯೭೭ರಲ್ಲಿ ಸಿ.ಬಿ.ಎಸ್. ಬೋಲ್ಶೋಯಿ ಬಗೆಗೆ ವಿಶೇಷ ಕಾರ್ಯಕ್ರಮ ಬಿತ್ತರಿಸಿತ್ತು. ಅದು ರಶ್ಯನ್ನರನ್ನು ಒಲಿಸುವ ಯತ್ನವೆಂಬುದನ್ನು ಸಿ.ಬಿ.ಎಸ್. ಮರೆಮಾಚಲಿಲ್ಲ.

ಮೂರೂ ದೂರದರ್ಶನ ಜಾಲದವರು ಮಾಸ್ಕೋಕ್ಕೆ ಬಂದಾಗ ಹರಾಜು ಏರ್ಪಡಿಸಬೇಕೆಂಬುದೇ ರಶ್ಯನ್ ಹಂಚಿಕೆಯಾಗಿತ್ತು. ಪ್ರತಿ ಜಾಲದವರು ತಮ್ಮ ಗರಿಷ್ಠ ಮೊತ್ತ ನಮೂದಿಸಿದ ಮುಚ್ಚಿದ ದರಖಾಸ್ತು ಸಲ್ಲಿಸಬೇಕಿತ್ತು. ಆ ಮೇಲೆ ಅತಿ ಹೆಚ್ಚು ಬೆಲೆ ಕೊಡಲೊಪ್ಪಿದವರ ಹೆಸರನ್ನು ಘೋಷಿಸಲಾಗುವುದು. ಸೋತವರು

---

ದಿಂದ ಸ್ವೀಕರಿಸಿದ ರೀತಿ ರಶ್ಯನ್ನರ ಪ್ರೀತಿಗೆ ಪಾತ್ರವಾಯಿತು. ಅಲ್ಲಿಂದೀಚೆಗೆ ಬಾಕ್ ತನ್ನ ಆರ್ಥಿಕ ಶಕ್ತಿ ಮರಳಿ ಪಡೆದಿದ್ದಾನೆ. ಅವನ ಕಾರ್ಯವಿಧಾನದಲ್ಲಿ ಒಳನೋಟವನ್ನು ಅವನ ಮಾಜಿ ಪಾಲುದಾರ ಒದಗಿಸಿದ್ದಾನೆ. "ಲೋಥಾರ್ ತನ್ನ ಸ್ವಂತದ ಹಣವನ್ನು ಎಂದೂ ವಿನಿಯೋಗಿಸುವದಿಲ್ಲ. ಅವನು ಲಾಭ ಮಾಡಿಕೊಳ್ಳಲೋಸುಗ ತನ್ನ ವಿಚಾರಗಳನ್ನು ಮತ್ತು ಇತರರ ಧನವನ್ನು ಬಳಸುತ್ತಾನೆ." ೧೯೭೫ರಲ್ಲಿ ಅವನ ಎಲ್. ಬಿ. ಎ. ಕಂಪನಿ ೨೦ ಲಕ್ಷ ಡಾಲರಿಗೂ ಮಿಕ್ಕಿ ಲಾಭ ಮಾಡಿಕೊಂಡಿತು. ಇದಕ್ಕೆ ಕಾರಣ ಅವನ ಜಾಣ ಮಾರ್ಪಾಟು. ರಶ್ಯನ್ ಹಾಡುಗಾರರು ಮತ್ತು ನಾಟಕತಂಡಗಳನ್ನು ಯುರೋಪಿಗೆ ತರುವದು ನಷ್ಟಕಾರಿ ವ್ಯವಹಾರವೆಂದರಿತಿದ್ದ ಲೋಥಾರ್ ಆ ಕಾರ್ಯಕ್ರಮಗಳನ್ನು ವೀಡಿಯೊ ಟೇಪ್ ಮೇಲೆ ಸೆರೆಹಿಡಿದು ದೂರದರ್ಶನ ಕಂಪನಿಗಳಿಗೆ ಲೈಸೆನ್ಸ್ ನೀಡಲು ನಿರ್ಧರಿಸಿದ. ಈ ವಿಧಾನ ಯಶಸ್ವಿಯಾಗಿ ಪರಿಣಮಿಸಿದೆ. ರಶ್ಯ ಸರಕಾರದೊಂದಿಗಿನ ಬಾಕನ ಸಂಬಂಧ ವಿವರಣೆ ಗಹನವಾಗಿದೆ.

ರಶ್ಯನ್ ದೂರದರ್ಶನ ಮತ್ತು ಆಕಾಶವಾಣಿ ಸಮಿತಿ ಅವನಿಗೆ ವೀಡಿಯೊ ಟೇಪಿನ ವಿಶೇಷ ಕಾರ್ಯಕ್ರಮಗಳಿಗಾಗಿ ಉದ್ದರಿ ಸೌಲಭ್ಯದ ಮೇರೆಗೆ ಉತ್ಪಾದನಾ ಸಲಕರಣೆಯನ್ನೂ ರಂಗಶಾಲೀಯ ಭವನಗಳನ್ನೂ ಒದಗಿಸುತ್ತಿದೆ ಮತ್ತು ತನಗೆ ಬರಬೇಕಾದ ಹಣಕ್ಕಾಗಿ ಬಾಕ್ ದೂರದರ್ಶನ ಕಂಪನಿಗಳಿಗೆ ಆ ಕಾರ್ಯಕ್ರಮಗಳನ್ನು ಮಾರುವ ತನಕ ಕಾಯುತ್ತದೆ. ಇದು ಸುಖಕರ ವ್ಯವಸ್ಥೆಯಲ್ಲದೆ ಇನ್ನೇನು? ಬಾಕ್, 'ತಾನು ಲಾಭ ಮಾಡಿಕೊಳ್ಳಬಯಸುವ ಬಂಡವಾಳಶಾಹಿಯೆ ಹೊರತು ರಶ್ಯನ್ ಪ್ರಚಾರಯಂತ್ರದ ಛದ್ಮವೇಷಧಾರಿದ ದಳ್ಳಾಳಿಯೇನಲ್ಲ' ಎಂದು ಹೇಳಿಕೊಳ್ಳುತ್ತಾನೆ.

ಕೊನೆಗೆ ದೂರದರ್ಶನ ಹಕ್ಕುಗಳ ನಾಟಕದಲ್ಲಿ ಅವನು ವಹಿಸಿದ ಪಾತ್ರಕ್ಕಾಗಿ ಎನ್. ಬಿ. ಸಿ. ಬಾಕನಿಗೆ ೧೦ ಲಕ್ಷ ಡಾಲರು ನೀಡಿತು.

ಇನ್ನೂ ಸ್ಪರ್ಧಿಸಬಯಸಿದರೆ ಆ ಮೊತ್ತಕ್ಕಿಂತ ಶೇಕಡ ೫ ರಷ್ಟನ್ನು ಹೆಚ್ಚು ಕೊಡಬೇಕು. ಇದು ಅವಮಾನಕರ ವಿಧಾನವಲ್ಲದೆ ಇನ್ನೇನು ? ವಸ್ಲರ್ ತಕ್ಷಣ ಇತರರೊಂದಿಗೆ ಒಗ್ಗೂಡಿಸಿ, ಪ್ರಸಾರ ಹಕ್ಕಿಗಾಗಿ ಸಮಾಲೋಚಿಸತೊಡಗಿದ. ಇಂಥ ಉಪಾಯ ರಶ್ಯನ್ನರ ಚೌಕಾಶಿ ಬಲವನ್ನು ತಗ್ಗಿಸುವುದೆಂದು ನಿರೀಕ್ಷಿಸಲಾಗಿತ್ತು. ಆದರೆ. ಆಸೆಬುರುಕ ಅಮೇರಿಕನ್ ಬಂಡವಾಳಶಾಹಿಗಳು ಲಾಭದಾಸೆಗಾಗಿ ಎಷ್ಟಾದರೂ ಹಣ ತೆತ್ತಾರೆಂದು ರಶ್ಯನ್ನರು ಆತ್ಮವಿಶ್ವಾಸ ಹೊಂದಿದ್ದರು. "ಬಂಡವಾಳಶಾಹಿಗಳು ಲಾಭದಾಸೆಗಾಗಿ ತಮಗೇ ಉರುಲಾಗುವ ಹಗ್ಗವನ್ನೂ ಕೊಂಡಾರು ?" ಎಂದು ಲೆನಿನ್ ಹೇಳಿರಲಿಲ್ಲವೇ? ಪರಿಸ್ಥಿತಿಯನ್ನು ರೂನ್ ಆರ್ಲೆಜ್ ಸ್ಪಷ್ಟವಾಗಿ ಚಿತ್ರಿಸಿದ; "ನಾವು ಬಾಟಲಿಯಲ್ಲಿಟ್ಟ ಮೂರು ಚೇಳುಗಳಂತೆ ಕಚ್ಚಾಡಬೇಕೆಂದು ರಶ್ಯನ್ನರ ಅಪೇಕ್ಷೆ. ಎಲ್ಲವೂ ಮುಗಿದಾಗ ಎರಡು ಸತ್ತಿರುವವು, ವಿಜಯಿ ನಿರ್ವೀರ್ಯವಾಗಿರುವದು."

ಇದುವರೆಗೆ ರಶ್ಯನ್ನರದೇ ಮೇಲುಗೈಯಾಗಿತ್ತು. ಆದರೀಗ ನೋವಿಕೋವ್ ಪ್ರಥಮ ತಾಂತ್ರಿಕ ತಪ್ಪು ಮಾಡಿದ. ಅವನು ೮ ಕೋಟಿ ಡಾಲರುಗಳ ಪಾನಕೂಟವೆಂದು ತದನಂತರ ಖ್ಯಾತವಾದ ಪಾನಕೂಟವೊಂದನ್ನು ಏರ್ಪಡಿಸಿದ. ಪ್ರಥಮ ಬಾರಿಗೆ ಒಂದೇ ಮಾಳಿಗೆಯ ಕೆಳಗೆ ಮೂರೂ ಜಾಲದವರು ಪರಸ್ಪರರನ್ನು ಭೇಟಿಯಾದರು. ಸೋವಿಯಟ್ ಸ್ಕಾಯಾ ಹೊಟೆಲಿನ ವಿಶಾಲ ಭೋಜನಭವನದಲ್ಲಿ ಲಿಂಡಮನ್, ವಸ್ಲರ್ ಮತ್ತು ಆರ್ಲೆಜ್ ತಮ್ಮ ರೋಷ ಕಾರಿದರು. ರಶ್ಯನ್ನರ ಸೌಜನ್ಯರಹಿತ ನಡತೆಯ ವಿರುದ್ಧ ಘೋಷಿಸಿದರು. ಮೂವರೂ ಮಾತುಕತೆಯ ಬಹಿಷ್ಕಾರ ಕುರಿತು ಚರ್ಚಿಸಿದರು. ಇದು ರಶ್ಯನ್ನರಿಗೆ ಆಘಾತವಾಯಿತು. ಮರುದಿನ ಅಮೇರಿಕನ್ನರನ್ನು ಸಾಂತ್ವನಪಡಿಸಲೋಸುಗ ಇನ್ನೊಂದು ಸಭೆ ಕರೆಯಲಾಯಿತು. ನೋವಿಕೋವ್‌ನನ್ನು ಡಿಸೆಂಬರ್ ೧೫ ರಂದು ವಸ್ಲರ್, ರಿರ್ಲೆಜ್ ಮತ್ತು ಶಾವರ್ ಭೇಟಿಯಾದರು. ರಶ್ಯನ್ನರ ನಿಲುವು ಧೋರಣೆಯಲ್ಲಿ ಬದಲಾವಣೆ ಕಂಡು ಬರಲಿಲ್ಲ. ಆದ್ದರಿಂದ ಮೂರೂ ಜಾಲದವರು ಮಾತುಕತೆ ಬಹಿಷ್ಕರಿಸಲು ಒಪ್ಪಿದರು. "ಬಹಿಷ್ಕರಿಸಿದ್ದೆ ಆದರೆ ನಿಮ್ಮನ್ನು ಇನ್ನೊಮ್ಮೆ ರಶ್ಯದ ನೆಲದ ಮೇಲೆ ಕಾಲಿಡಲು ಕೊಡುವದಿಲ್ಲ" ಎಂದು ನೋವಿಕೊವ್ ಬೆದರಿಸಿದ. ಬೆದರಿಕೆ ಅಮೇರಿಕನ್ನರ ಮೇಲೆ ಇಚ್ಛಿತ ಪರಿಣಾಮ ಬೀರಲಿಲ್ಲ.

ಮರುದಿನ ಒಂದೇ ತೆರನ ಒಕ್ಕಣೆಯಲ್ಲಿ ಮೂರೂ ಜಾಲದವರು ವೈಯಕ್ತಿಕ ಮಾತುಕತೆಗಳನ್ನು ಸ್ಥಗಿತಗೊಳಿಸಿರುವದಾಗಿ ಬರೆದು ತಿಳಿಸಿದರು. ಕೆಲ ಕಾಲ ರಶ್ಯನ್ನರು ಮತ್ತು ಅಮೇರಿಕನ್ನರ ಮಧ್ಯ ಸಂಪರ್ಕವೇ ಇರಲಿಲ್ಲ. ಆದಾಗ್ಯೂ ಅದಮ್ಯ ಬಾಕ್ ಸಿ. ಬಿ. ಎಸ್. ಪರವಾಗಿ ಪ್ರಯತ್ನ ಮುಂದುವರೆಸಿದ್ದ. ಆರ್ಲೆಜ್‌ನಿಗೆ ಬಾಕನ ಚಲನವಲನಗಳ ಸುಳಿವು ಹತ್ತಿ "ನಿನಗೇನಾದರೂ ಪರಿಸ್ಥಿತಿಯ ಅರಿವು ಇದೆಯೇ?" ಎಂದು ವಸ್ಲರ್‌ನನ್ನು ವಿಚಾರಿಸಿದ. ತನಗೇನೂ ಗೊತ್ತಿಲ್ಲವೆಂದು ತಿಳಿಸಿದ ವಸ್ಲರ್ ಸಿ. ಬಿ. ಎಸ್. ಪ್ರತಿನಿಧಿಯಾಗಿ ಮಾತುಕತೆ ಮುಂದುವರಿಸದಂತೆ ಬಾಕನಿಗೆ ಬರೆಯುವದಾಗಿ ಹೇಳಿದ.

ಈಗ ಚೆಂಡು ರಶ್ಯನ್ನರ ಅಂಗಣದಲ್ಲಿ. ದೂರದರ್ಶನ ಹಕ್ಕುಗಳನ್ನು 'ಸಾತ್ರಾ'ಗೆ ಕೊಟ್ಟಿರುವದಾಗಿ ಘೋಷಿಸುವ ಮೂಲಕ ರಶ್ಯ ಪ್ರತಿಕ್ರಿಯೆ ವ್ಯಕ್ತಮಾಡಿತು. 'ಸಾತ್ರಾ' ರಶ್ಯನ್-ಅಮೇರಿಕನ್ ಚಲನಚಿತ್ರಗಳ ವಾಣಿಜ್ಯ, ಟ್ರಕ್ಕುಗಳ ಮತ್ತು ವಾಹನಗಳ ವ್ಯವಹಾರದ ಅಂತಾರಾಷ್ಟ್ರೀಯ ಕಂಪನಿ. ಇದೊಂದು ಮುಖವುಳಿಸಿಕೊಳ್ಳುವ ಹಂಚಿಕೆ, ಯಾವ ಅಮೇರಿಕನ್ ದೂರದರ್ಶನ ಜಾಲದವರೂ ಪ್ರಸಾರ ಹಕ್ಕು ವಿರೋಧಿಸದಿದ್ದುದು ರಶ್ಯನ್ನರಿಗೆ ಕಳವಳವುಂಟು ಮಾಡಿದೆ ಎಂದು ಅಮೇರಿಕನ್ನರು ಭಾವಿಸಿದರು. 'ಸಾತ್ರಾ'ಗೆ ನೀಡಿದ ಹಕ್ಕುಗಳು ಪ್ರಾಯೋಗಿಕವೆಂದೂ ಮಾತುಕತೆಗೆ ಇನ್ನೂ ಬಾಗಿಲು ತೆರೆದಿದೆಯೆಂದೂ ಜನವರಿ ೧೮ರಂದು ರಶ್ಯನ್ ಮೇಳಕರೊಂದು ಹೊರಡಿತ್ತು. "ಒಂದು ಸಮರ್ಥ ಹಾಗೂ ಖ್ಯಾತ ಕಂಪನಿಗೆ ದೂರದರ್ಶನ ಹಕ್ಕುಗಳನ್ನು ನೀಡಲು ನಾವು ಉತ್ಸುಕರಾಗಿದ್ದೇವೆ," ಎಂದು ನೋವಿಕೋವ್ ಹೇಳಿದ. ಆದರೆ ಜಾಲ

ದವರ ಮನಸು ಇನ್ನೂ ಅರಿರಲಿಲ್ಲ. "ಒಲಿಂಪಿಕ್ಸನ್ನು ಪ್ರಸಾರ ಮಾಡಲು ನಾವು ಎಷ್ಟಾದರೂ ಬೆಲೆ ತೆರಬೇಕೆಂದು ನನಗನಿಸದು." ಎಂದು ಎನ್. ಬಿ. ಸಿ. ಯ ಹರ್ಬರ್ಟ್ ಸ್ಲಾಸರ್ ಅಭಿಪ್ರಾಯಪಟ್ಟ.

ನೋವಿಕೋವ್ ರಾಜ ಹೇಳಿಕೆಯಿತ್ತ ಎಂಟು ದಿನಗಳ ನಂತರ ಅತ್ಯಂತ ಕುತೂಹಲಕಾರಿ ಬೆಳವಣಿಗೆ ಮೂಡಿಬಂತು. ಬಾಕನ ಮಧ್ಯಸ್ಥಿಕೆಯಿಂದ ಮುಂಚೂಣಿಯಲ್ಲಿದ್ದ ಬೋಲ್ಶೋಯ್ ಮತ್ತು ನಾದಿಯಾ ಕೊಮನೆಚಿ ಕುರಿತು ವಿಶೇಷ ರೂಪಕಗಳನ್ನು ಚಿತ್ರಿಸಿದ್ದರಿಂದಾಗಿ ಸಿ.ಬಿ. ಎಸ್. ಮಾತುಕತೆಯಿಂದ ಹೊರಬೀಳುವದಾಗಿ ಘೋಷಿಸಿತು. "೧೯೮೦ ರ ಕ್ರೀಡೆಗಳ ಅನೇಕ ಅನಿಶ್ಚಿತ ಅಂಶಗಳನ್ನು ಅನುಲಕ್ಷಿಸಿದರೆ ಹೊರಗುಳಿಯುವ ನಮ್ಮ ಮಾರ್ಗ ಸರಿಯಾದುದು. ಮೂರೂವರೆ ವರ್ಷಗಳ ನಂತರ ಜರುಗಲಿದ್ದ ಹದಿನೇಳು ದಿವಸಗಳ ಸ್ಪರ್ಧೆಗಳಿಗಾಗಿ ಭಾರಿ ಮೊತ್ತವನ್ನು ಕೇಳಲಾಗುತ್ತಿದೆ. ನಾವು ತೊಡಗುತ್ತಿರುವ ಸಮಯ ಹಾಗೂ ಪಡುತ್ತಿರುವ ತೊಂದರೆಗೆ ಅದು ಯೋಗ್ಯವಲ್ಲ" ಎಂದು ವಸ್ಲರ್ ಸ್ಪಷ್ಟಪಡಿಸಿದ. ರಷ್ಯ ೨ ಕೋಟಿ ಹಾಗೂ ೩ ಕೋಟಿ ಡಾಲರುಗಳನ್ನು ಮುಂಗಡ ಕಂತಾಗಿ ನೀಡಬೇಕೆಂದು ಕರಾರನ್ನು ಹಾಕಿತ್ತು.

ಸಿ. ಬಿ. ಎಸ್. ಹೊರಬಿದ್ದುದರಿಂದ ಎಲ್ಲರೂ ಸೇರಿ ಪ್ರಸಾರ ಹಂಚಿಕೊಳ್ಳುವ ವಿಚಾರ ಕುಸಿಯಿತು. ಲೋಥಾರ್ ಬಾಕನಿಗೂ ಆಘಾತವಾಯಿತು. ಟಾಕ್ ಸಿ. ಬಿ. ಎಸ್. ಮಾತುಕತೆಗಳನ್ನು ಪುನಃ ಕುದುರಿಸಲು ಯತ್ನಿಸಿ ವಿಫಲನಾದ. ಎನ್. ಬಿ. ಸಿ. ಯನ್ನು ಸಂಪರ್ಕಿಸಲು ಅನುಕೂಲವಾಗುವಂತೆ ತನ್ನನ್ನು ಒಡಂಬಡಿಕೆಯಿಂದ




"ನೀವು ಮೊನ್ನೆ ಶ್ಯಾಂಭಟ್ರು ಹೀರಿಕೊಂಡರು ಅಂದೆಯಲ್ಲ... ಇದೇ ಶಾಂಭಟ್ರ-

ಮುಕ್ತಗೊಳಿಸಬೇಕೆಂದು ಬ್ರಾಶ್ ಸಿ.ಬಿ. ಎಸ್.ನ್ನು ಕೇಳಿಕೊಂಡ, ಬ್ರಾಶ್ ಎನ್. ಬಿ. ಸಿ. ಗೆ ಹೋಗಲು ನಿರ್ಧರಿಸಿದ್ದ. ಏಕೆಂದರೆ ತನ್ನ ಓಲಿಂಪಿಕ್ ಅನುಭವದ ಮೇಲೆ ಭರವಸೆಯಿಟ್ಟಿದ್ದ. ಎ. ಬಿ. ಸಿ. ಅವನ ಸಹಾಯ ಪಡೆಯಲು ಇಚ್ಛಿಸಿರಲಿಲ್ಲ. ಲಿಂಡಮನ್ ಮತ್ತು ಎನ್. ಬಿ. ಸಿ. ಬ್ರಾಕನ ಮಹತ್ವ ಅರಿತಿದ್ದರು. ಬ್ರಾಕನನ್ನು ವ್ಯವಹಾರದಲ್ಲಿ ತೊಡಗಿಸಿದ್ದು ಅತ್ಯಂತ ಚಾಣಾಕ್ಷತನವೆಂದು ನಂತರ ಸಿದ್ಧಪಟ್ಟಿತು. ಜನವರಿ ೨೬ ರಂದು ಲಿಂಡ್‌ಮನ್ ಪ್ಲಾರಿಡಾದಲ್ಲಿ ಬ್ರಾಕನನ್ನು ಭೇಟಿಯಾದ. ರಷ್ಯನ್ನರು ಅಧೀರರಾಗಿರುವರೆಂದೂ ದೂರದರ್ಶನ ವ್ಯವಹಾರದ ಅನಿಶ್ಚಿತತೆಯನ್ನು ಕೊನೆಗೊಳಿಸಲು ಆತುರರಾಗಿದ್ದಾರೆಂದೂ ವ್ಯವಹಾರ ಬೇಗ ಮುಗಿಯುವದೆಂದೂ ಬ್ರಾಕ್ ಭರವಸೆ ನೀಡಿದ. ಲಿಂಡ್‌ಮನ್ ಎನ್. ಬಿ. ಸಿ. ಪರವಾಗಿ ಮಾತುಕತೆ ನಡೆಸಲು ಬ್ರಾಕನಿಗೆ ಅಧಿಕಾರವಿತ್ತ. ಅವನು ರಷ್ಯದ ರಾಜಧಾನಿಗೆ ತೆರಳಿದ. ಅದು ಕಳೆದ ಹತ್ತು ತಿಂಗಳು ಅವನ ವಾಸಸ್ಥಾನವಾಗಿತ್ತು. ಮರುದಿನ ಲಿಂಡ್‌ಮನ್ ಹಾವರ್ಡ್ ಮತ್ತು ಇನ್ನಿಬ್ಬರು ಎನ್. ಬಿ. ಸಿ. ಅಧಿಕಾರಿಗಳು ಮಾಸ್ಕೋದಲ್ಲಿ ಬಂದಿಳಿದರು.

ಎ. ಬಿ. ಸಿ. ಗೆ ಸುಳಿವು ಸಿಕ್ಕುವ ಮುನ್ನವೆ ವ್ಯವಹಾರ ಮುಗಿಸಿಕೊಳ್ಳಬೇಕೆಂದು ಎನ್. ಬಿ. ಸಿ. ತಂಡದ ಆಶಯ. ಆದರೆ ರೂನ್ ಆರ್ಲೆಜ್‌ನಿಗೆ ತಿಳಿದಂತೆ ವ್ಯವಹಾರ ಪೂರ್ಣವಾಗಿ ಸಂಪನ್ನವಾಗಿರಲಿಲ್ಲ. ರಷ್ಯನ್ನರು ಬಯಸಿದವೊಂದು ರಾತ್ರಿ ಕಳೆದಾಗ್ಯೂ ಕೊನೆಯ ಗಳಿಗೆಯಲ್ಲಿ ಏನಾದರೂ ಚಮತ್ಕಾರ ಜರುಗಬಹುದೆಂದು ಆಶಿಸಿ ಆರ್ಲೆಜ್ ಮಾಸ್ಕೋಗೆ ಬಂದಿದ್ದ. ಆದರೆ ಅವನು ಬರುವದರಲ್ಲಿ ಎಲ್ಲ ಮುಗಿದಿತ್ತು. ಎನ್. ಬಿ. ಸಿ. ಬಹಳ ವೇಗದಿಂದ ಮುಂದುವರಿದಿತ್ತು. ರಷ್ಯ ದೀರ್ಘ ಅನಿಶ್ಚಿತತೆಯ ಕೊನೆಗಾಣಿಸಲು ಆತುರವಾಗಿತ್ತು. ೧೯೮೦ ರ ಓಲಿಂಪಿಕ್ ಕ್ರೀಡೆಗಳ ದೂರದರ್ಶನ ಹಕ್ಕುಗಳು ಎನ್. ಬಿ. ಸಿ. ಯ ಪಾಲಾಗಿದ್ದವು.

ಫೆಬ್ರುವರಿ ೧,೧೯೭೭ ರಂದು ಎನ್. ಬಿ. ಸಿ. ದೂರದರ್ಶನ ಹಕ್ಕುಗಳಿಗಾಗಿ ಅತ್ಯಂತ ಹೆಚ್ಚು ಮೊತ್ತ ಕೊಡಲೊಪ್ಪಿತು: ಹಕ್ಕುಗಳಿಗಾಗಿ ೩.[illegible] ಕೋಟಿ ಡಾಲರು (ಅದರಲ್ಲಿ ಸುಮಾರು ೧.[illegible] ಕೋಟಿ ಅಂತಾರಾಷ್ಟ್ರೀಯ ಓಲಿಂಪಿಕ್ ಸಮಿತಿಗೆ ಹೋಗುವದು) ಮತ್ತು ಸಲಕರಣೆಗಾಗಿ ೫ ಕೋಟಿ ಡಾಲರು. ಈ ಮೊತ್ತ ಹೆಚ್ಚೇನೂ ಅಲ್ಲ ಎಂದು ಎನ್. ಬಿ. ಸಿ. ವಾದಿಸಿತು. ಕ್ರೀಡೆಗಳು ಲಂಡನ್ ಅಥವಾ ಪ್ಯಾರಿಸಿನಲ್ಲಿ ಜರುಗಿದ್ದರೂ ದೂರದರ್ಶನ ಹಕ್ಕುಗಳು ಇಷ್ಟೇ ದುಬಾರಿಯಾಗುತ್ತಿದ್ದವು, ಅತಿ ಪ್ರಸರಣದಿಂದಾಗಿ ಬೆಲೆಯೇರಿಕೆಯಾಗಿರುವದು ಸಹಜ ಎಂದು ಎನ್. ಬಿ. ಸಿ. ಸಮರ್ಥಿಸಿಕೊಂಡಿತು. ಅಕಸ್ಮಾತ್ ಕ್ರೀಡೆಗಳು ಜರುಗದಿದ್ದ ಪಕ್ಷದಲ್ಲಿ ಹಣ ವಾಪಸು ಪಡೆಯುವ ಸಮರ್ಪಕ ವ್ಯವಸ್ಥೆಯನ್ನೂ ಎನ್. ಬಿ. ಸಿ. ಮಾಡಿಕೊಂಡಿತ್ತು. ರಷ್ಯಪರ ಪ್ರಸಾರದ ವಿಷಯ ಮಾತುಕತೆಯಲ್ಲಿ ಉದ್ಭವಿಸಲಿಲ್ಲ. ಎನ್. ಬಿ. ಸಿ. ತನ್ನ ವೃತ್ತಿ ನೀತಿಯನ್ನು ಕುಲಗೆಡಿಸದು.

ಹೀಗೆ ದೂರದರ್ಶನ ಹಕ್ಕಿಗಾಗಿ ಓಲಿಂಪಿಕ್ ಇತಿಹಾಸದಲ್ಲಿಯೆ ಅತ್ಯಂತ ದುಬಾರಿ ಮತ್ತು ಕ್ಲಿಷ್ಟ ಹೋರಾಟ ಕೊನೆಗೊಮ್ಮೆ ಕೊನೆಗೊಂಡಿತು. ಮಾತುಕತೆ ನಡೆದಾಗ [illegible] ಕೋಪ್ ಎನ್.ಬಿ.ಸಿ. ಯನ್ನು ಎ. ಬಿ. ಸಿ. ಎಂದು ಉಲ್ಲೇಖಿಸಿದ. ಏನೇ ಆದರೂ ರಷ್ಯನ್ನರ ದೃಷ್ಟಿಯಲ್ಲಿ ಒಂದು ಅಮೇರಿಕನ್ ದೂರದರ್ಶನ ಜಾಲ ಇನ್ನೊಂದರಂತೆಯೆ, ಅಲ್ಲವೆ?



ಯಾರಾದರೂ ನಮ್ಮಪ್ಪ ಹೀಗೆ, ನಮ್ಮ ತಾತ ಹಾಗೆ, ನಮ್ಮ ಮುತ್ತಾತ ಇಷ್ಟು ಸಾಧಿಸಿದ್ದ ಎಂದು ಹೇಳಿಕೊಳ್ಳುತ್ತಿದ್ದರೆ ಅದನ್ನುಳಿದು ಕೊಚ್ಚಿಕೊಳ್ಳಲು ಆತನಲ್ಲಿ ಬೇರೇನೂ ಇಲ್ಲವೆಂದರ್ಥ. —ಸರ್ ಥಾಮಸ್ ಓವರ್‌ಬರಿ

ಸುಂದರವಾದುದೆಂದೂ ಸಾಯುವುದಿಲ್ಲ, ಉಳಿದ ಸೌಂದರ್ಯದಲ್ಲಿ ಲೀನವಾಗುತ್ತದೆ ಅಷ್ಟೆ. —ಥಾಮಸ್ ಬೇಲಿ ಆಲ್ಡ್ರಿಚ್

1976






ಕುಟುಂಬ ಯೋಜನಾ ಘೋಷಣೆಗಳು!

1981 !






1985 ?






Nikhil A. Kolpe.

ಜಗತ್ತಿನ ಶೂದ್ರರು ಎದ್ದೇಳುವರು, ಮಹಾಶಕ್ತಿಯ (ಶಿವಶಕ್ತಿಯ) ಅನುಲ್ಲಂಘನೀಯ ಆಜ್ಞೆಯಿದು. ಇಡೀ ಪೂರ್ವದಿಗ್ವಲಯವು ಉದ್ಬುದ್ಧವಾಗಿ ಎದ್ದು, ಹೊಸ ಮಾನವ ಸೃಷ್ಟಿಯನ್ನು ರೂಪಿಸಲಿದೆಯೆಂಬುದು ಹಗಲಿನಷ್ಟು ಸುಸ್ಪಷ್ಟವಾದ ಸಂಗತಿಯಾಗಿದೆ. ಅಹೋ! ಚೀನ ದೇಶದ ಭಾವೀ ಹಿರಿಮೆ ಹಾಗೂ ಅವರ ಹಿಂದೆಯೇ ಏರುವ ಎಲ್ಲ ರಾಷ್ಟ್ರಗಳ ಹಿರಿಮೆ... ದೂರದರ್ಶಕ ಯಂತ್ರದೊಳಗಿಂದ ಖಗೋಲಶಾಸ್ತ್ರಜ್ಞರು ನಕ್ಷತ್ರಗಳ ಚಲನೆಗಳನ್ನು ನೋಡುವಂತೆ ನನ್ನ ದರ್ಶನದ ಧ್ಯಾನದಲ್ಲಿ ಜಗತ್ತಿನ ಚಲನವಲನಗಳು ಸ್ಪಷ್ಟವಾಗುತ್ತಿವೆ. ನನ್ನೀ ಮಾತು ಸತ್ಯವಾಗುವುದೆಂದು ತಿಳಿಯಿರಿ. ಈ ಶೂದ್ರರ ಅಭ್ಯುತ್ಥಾನ ಮೊದಲು ರಶಿಯದಲ್ಲಿ, ಅನಂತರ ಚೀನದಲ್ಲಿ ಜರುಗುವುದು. ಆಮೇಲೆ ಭಾರತ ಎದ್ದೇಳುವುದು. ಹಾಗೂ ಭವಿಷತ್ ಜಗತ್ತಿಗೆ ರೂಪು ಕೊಡುವ ಕಾರ್ಯದಲ್ಲಿ ಮಹತ್ವದ ಪಾತ್ರವನ್ನು ತಾಳುವುದು.

—ಸ್ವಾಮಿ ವಿವೇಕಾನಂದ

# ಭಾರತದ ಅಭ್ಯುತ್ಥಾನ

ವಿನೀತ ರಾಮಚಂದ್ರರಾಯ

ಎಂತಹ ಅದ್ಭುತ ಅಷ್ಟೇ ಸತ್ಯವಾದ ಕಾಲಜ್ಞಾನವಿದು! ಸ್ವಾಮಿ ವಿವೇಕಾನಂದರ ಜನ್ಮ ೧೮೬೩ರಲ್ಲಿ, ನಿರ್ವಾಣ ೧೯೦೨ರಲ್ಲಿ.

೩೯ ವರ್ಷಗಳ ಅವರ ಆಯುಸ್ಸು ಭಾರತದ ಆಧ್ಯಾತ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಒಂದು ಅತಿ ಮಹತ್ವದ ಘಟನೆ. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಸ್ವಾಮಿಯವರ ಜೀವನ ಭಾಗ ಸಂದಿತು. ಹದಿನೆಂಟನೆಯ ಶತಮಾನದಲ್ಲಾದ ಉಗಿ ಯಂತ್ರದ ಸಂಶೋಧನದಿಂದ ಯುರೋಪಿನ ಔದ್ಯೋಗಿಕ ಅಭಿವೃದ್ಧಿ ತ್ವರಿತವಾಗಿ ನಡೆಯಲು ದಾರಿಯಾಯಿತು. ಹತ್ತೊಂಬತ್ತನೆಯ ಶತಮಾನದ ಮಧ್ಯದ ಸುಮಾರಿಗೆ ಉಗಿ ಹಡಗುಗಳು ದೊಡ್ಡ ಪ್ರಮಾಣದಲ್ಲಿ ಬಳಸಲ್ಪಟ್ಟು ಇಂಗ್ಲೆಂಡ್, ಫ್ರಾನ್ಸ್, ಸ್ಪೇನ್ ಆದಿ ಯುರೋಪಿನ ಸಮುದ್ರ ತೀರದ ರಾಷ್ಟ್ರಗಳು ಜಗತ್ತಿನ ನಾನಾ ಭಾಗಗಳಿಗೆ (ಉ: ಅಮೇರಿಕ, ಆಸ್ಟ್ರೇಲಿಯಾ, ಆಫ್ರಿಕ) ವಲಸೆಗಾರರನ್ನು ಕಳಿಸಿ ಅಲ್ಲಿಯ ವಸಾಹತುಗಳನ್ನು ಭದ್ರಗೊಳಿಸಲು ಕಾರಣವಾದವು. ಯುರೋಪಿನ ಔದ್ಯೋಗಿಕ, ಆರ್ಥಿಕ ಅಭಿವೃದ್ಧಿಗೆ ಇತರ ವೈಜ್ಞಾನಿಕ ಸಂಶೋಧನೆಗಳೂ ನೆರವಾದವು. ಕೆಲ ವರ್ಗಗಳು ಸಂಪತ್ಸಮೃದ್ಧವಾದರೆ, ಸಂಪನ್ನಿರ್ಮಾಣಕ್ಕಾಗಿ ದುಡಿಯುವ ಕೆಳಗಿನ ವರ್ಗಗಳ ಸ್ಥಿತಿ ನಿಕೃಷ್ಟವಾಗುತ್ತಿದ್ದುದರ ಪರಿಣಾಮವಾಗಿ [illegible] [illegible] ಸಮಾಜವಾದದ ವಿಚಾರ [illegible] [illegible] [illegible] [illegible] ಅದಕ್ಕೆ [illegible]




ಮಾನವ ಸ್ವರೂಪ ಕೊಟ್ಟವ ಜರ್ಮನಿಯ ಕಾರ್ಲ್ ಮಾರ್ಕ್ಸ್. ೧೮೪೮ರಲ್ಲಿ ಅವ ಹೊರಡಿಸಿದ Communist Manifesto (ಸಾಮ್ಯವಾದಿಗಳ ಘೋಷಣೆ) ಅಂದಿನ ದಲಿತ ಶ್ರಮಜೀವಿಗಳನ್ನು ಹಾಗೂ ಅವರನ್ನು ಕುರಿತು ಸಹಾನುಭೂತಿಪರರಾದ ಮಧ್ಯಮವರ್ಗೀಯರನ್ನು ಹೊಡೆದೆಬ್ಬಿಸಿತು. 'ಕೆಲಸಗಾರರು ಕಳೆದುಕೊಳ್ಳುವದು ತಮ್ಮ ಶೃಂಖಲೆಗಳನ್ನು ಮಾತ್ರ, ಅವರು ಗೆಲ್ಲಲಿರುವುದು ಒಂದು ನವ ಜಗತ್ತನ್ನು. ಎಲ್ಲ ದೇಶಗಳ ಕಾರ್ಮಿಕರೇ ಒಕ್ಕಟ್ಟಾಗಿರಿ!' ಎಂದು ಅವನಿತ್ತ ಕರೆ ಇನ್ನೂ ಜಗತ್ತಿನ ಮೂಲೆ ಮೂಲೆಯಲ್ಲಿ ಪ್ರತಿಧ್ವನಿಸುತ್ತಿದೆ.

ಅದೇ ವರ್ಷ (೧೮೪೮) ಫ್ರಾನ್ಸಿನಲ್ಲಿ ರಾಜ್ಯಕ್ರಾಂತಿ ಕಾರ್ಲ್ ಮಾರ್ಕ್ಸ್ ವಿವರಿಸಿದ ವಿಚಾರಸರಣಿಯ ರೀತಿಯಲ್ಲಿ ಜರುಗಿತು. ಆದರೆ ಅದು ತಾಳಲಿಲ್ಲ. ಜರ್ಮನಿ, ಆಸ್ಟ್ರಿಯ ಹಾಗೂ ಅವರ ಅಧೀನ ರಾಷ್ಟ್ರಗಳು ಪೋಲಂಡ್ ಮೊದಲಾದ ಕಡೆಗಳಲ್ಲೆಲ್ಲ ಈ ರಾಜ್ಯಕ್ರಾಂತಿಯ ನಿನಾದಗಳಿಂದ ಉಂಟಾದ ಪ್ರಯತ್ನಗಳೂ ನಡೆದುವು. ಕೆಲವು ವರ್ಷ ಅವರ ಅಬ್ಬರ ಕೇಳಿಬರುತ್ತಲೇ ಇತ್ತು. ಈ ಅವಧಿಯಲ್ಲಿ ಈ ಕ್ರಾಂತಿಕಾರಿ ಆಂದೋಲನದಿಂದ ತಲೆ ಕೆಡಿಸಿಕೊಳ್ಳದೆ ಕೂಲಿಕಾರರ ಯೋಗ್ಯ ಬೇಡಿಕೆಗಳಿಗೆ ಮನ್ನಣೆಯೀಯುತ್ತ. ಹಲವು ಪೀಳಿಗೆಗಳ ಅನುಭವದಿಂದ ರೂಪುಗೊಂಡ ತನ್ನ ಸ್ಥಿರ (ಅರಸೊತ್ತಿಗೆಯಿದ್ದರೂ ಪ್ರಜಾಸತ್ತಾತ್ಮಕ ಸ್ವರೂಪದ) ರಾಜ್ಯಪದ್ಧತಿಯನ್ನು ಬಿಡದಿದ್ದ ಯುರೋಪಿಯ ರಾಷ್ಟ್ರವೆಂದರೆ ಬ್ರಿಟನ್ ಒಂದೇ. ಯುರೋಪಿನಲ್ಲಿ ಅಲ್ಲಲ್ಲಿದ್ದ ಕಾರ್ಮಿಕರ ಹಾಗೂ ರಾಷ್ಟ್ರೀಯರ ಬಂಡಾಯಗಳು ಹತ್ತಿಕ್ಕಲ್ಪಟ್ಟು ಸರ್ವಾಧಿಕಾರಿತ್ವಗಳು ಅರಸೊತ್ತಿಗೆಗಳು ಮತ್ತೆ ಅಧಿಕಾರಾರೂಢವಾದುವು.

ಜಗತ್ತಿನ ಘಟನೆಗಳ ಸೂಕ್ಷ್ಮ ಪರಿಶೀಲನೆಯಿಂದ ಮುಂದಿನ ವಿದ್ಯಮಾನಗಳನ್ನು ಕುರಿತು ಅಂದಾಜು ಕಟ್ಟುವದು ಅಸಾಧ್ಯವಲ್ಲ. ಆದರೆ ಸ್ವಾಮೀಜಿಯ ಹೇಳಿಕೆ ಸತ್ಯರೂಪದಲ್ಲಿ ಪ್ರಕಟವಾದುದು ಅವರ ನಿರ್ವಾಣದ ತರುವಾಯ. ಚೀನದ ಮಾನವಕೋಟಿ ತೀರ ಈಚೆಗೆ ನಡೆಸಿದ ಸಾಮ್ಯವಾದಿ ಸ್ವರೂಪದ ಕ್ರಾಂತಿಯನ್ನೂ ಅವರ ಕ್ರಾಂತದೃಷ್ಟಿ ಕಂಡುಕೊಂಡುದು ವಿಸ್ಮಯಕಾರಕ.

ಸ್ವಾಮೀಜಿ ನುಡಿದ ಭವಿಷ್ಯವನ್ನು ನಾವು ಈ ರೀತಿಯಾಗಿ ಅರ್ಥಯಿಸಬಹುದು.

(೧) ಜಗತ್ತಿನಲ್ಲಿ ಬ್ರಾಹ್ಮಣರ (ಧರ್ಮಗುರುಗಳ) ರಾಜ್ಯದ ದಿನಗಳು ಹಳೆಯ ಮಾತಾದವು; ಹಾಗೆಯೇ ಕ್ಷತ್ರಿಯರ (ಶಸ್ತ್ರ ಬಲದವರ) ಮತ್ತು ವೈಶ್ಯರ (ವ್ಯಾಪಾರ ಉದ್ಯಮ ವೃತ್ತಿಯವರ) ರಾಜ್ಯಗಳೂ ಉರುಳಿದವು, ಉರುಳುತ್ತಿವೆ. ಶೂದ್ರರ (= ಕಾರ್ಮಿಕರ) ಅರಸೊತ್ತಿಗೆ ಕಾಲಚಕ್ರದ ತಿರುಗುವಿಕೆಯಲ್ಲಿ ಅನಿವಾರ್ಯ. ಈ ಶೂದ್ರಕ್ರಾಂತಿ ಮೊದಲು ರಶಿಯದಲ್ಲಿ ನಡೆದು ತರುವಾಯ ಚೀನದಲ್ಲಿ ನಡೆದಿದೆ (ಇನ್ನೂ ನಡೆಯುತ್ತಿದೆ).

(೨) ಇಡೀ ಏಶಿಯವೇ ಎದ್ದೇಳುವುದು. ನವಮಾನವ ಜಗತ್ತನ್ನು ನಿರ್ಮಿಸುವದು. ಚೀನದ ಅಭ್ಯುದಯ ಇದಕ್ಕೆ ನಾಂದಿಯಾಗುವುದು. ಇತರ ಏಶಿಯನ್ ರಾಷ್ಟ್ರಗಳೂ ಈ ಜಾಡಿನಲ್ಲಿ ನಡೆಯುವವು.

(೩) ರಶಿಯ–ಚೀನಗಳ ತರುವಾಯ ಭಾರತದ ಅಭ್ಯುತ್ಥಾನ. ಅದು ತನ್ನ ದಾರಿಯಲ್ಲಿಯೇ ಸಾಗಿ ಮುಂಬರುವ ಜಗತ್ತನ್ನು ರೂಪಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸುವುದು.

ಪೋಪರೇ ಮೊದಲಾದ ಧರ್ಮಗುರುಗಳ ಆಳಿಕೆಯ ಆಳಿಗಾಲ ಕೇವಲ ಶಸ್ತ್ರ ಬಲದಿಂದಲೇ ಆಳುವವರ ವರ್ಗದ (ಆನುವಂಶಿಕ ರಾಜತ್ವದ ಪಾಳೆಗಾರಿಕೆಯ) ಆಳಿಗಾಲ, ಉದ್ಯಮಪತಿಗಳ ವಾಣಿಜ್ಯ ಧುರೀಣರ ಸೂತ್ರಚಾಲನೆಯಿಂದ ನಡೆಯುವ ರಾಜ್ಯಗಳ (ಉತ್ತರ ಭಾರತದಲ್ಲಿಯ ಬ್ರಿಟಿಶ್ ಸತ್ತೆ) ಆಳಿಗಾಲ ಇವೆಲ್ಲವನ್ನೂ ನಾವು ಅರಿತುದುಂಟು, ಕಂಡುದುಂಟು. ವಿಜ್ಞಾನದ ಅದ್ಭುತ ಸಂಶೋಧನೆಗಳ ಸಹಾಯದಿಂದ ನಡೆದ ಯಂತ್ರನಿರ್ಮಿತ ಔದ್ಯೋಗಿಕ ಕ್ರಾಂತಿಯ ಪರಿಣಾಮವಾಗಿ ಕಾರ್ಮಿಕ ಜನಕೋಟಿಯ ಸುಪ್ತ

ಶಕ್ತಿಯು ಜಾಗೃತವಾಗಿ, ಸ್ವಬಲಪರಿಜ್ಞಾನದಿಂದ ರಾಜ್ಯಸೂತ್ರಗಳನ್ನು ಧರಿಸುವ ತೀವ್ರ ಇಚ್ಛೆಯನ್ನು ತಾಳುವದು ಹಾಗೂ ಅದಕ್ಕಾಗಿ ಕಾರ್ಯತಃ ಪ್ರವೃತ್ತವಾಗುವುದು ಮಾನವ ಸ್ವಭಾವದ ದೃಷ್ಟಿಯಿಂದ ಸಹಜೀಕವೇ ಆಗಿದೆ.

ಸ್ವಾಮೀಜಿ ದೇಹಬಿಟ್ಟುದು ೧೯೦೨ರಲ್ಲಿ. ೧೯೦೦ ರಲ್ಲಿ ರಶಿಯದಲ್ಲಿ ಸಮಾಜವಾದ ದೃಷ್ಟಿಕೋನದ ಬೋಲ್ಶೆವಿಕ್ ಹಾಗೂ ಮೆನ್‌ಶಿವಿಕ್ ಪಕ್ಷಗಳು ತಲೆಯೆತ್ತಿದವು. ಮೆನ್‌ಶಿವಿಕರು ಸಾಮ್ಯಮತ–ವಾದಿಗಳಾಗಿದ್ದರೆ ಬೋಲ್ಶೆವಿಕರು ತೀವ್ರ ಮತವಾದಿಗಳು, ಎಂದರೆ ನಿಷ್ಠಾವಂತ ಸಾಮ್ಯವಾದಿಗಳಾಗಿದ್ದರು. ರಶಿಯದಲ್ಲಿ ಝಾರರ ಅನಿಯಂತ್ರಿತ ಸತ್ತೆ ಶತಮಾನಗಳಿಂದ ನಡೆದು ಬಂದಿತ್ತು. ಪ್ರಜೆಗಳಿಗೆ ಸ್ವಾತಂತ್ರ್ಯದ ಪ್ರಾಥಮಿಕ ಹಕ್ಕುಗಳು ಕೂಡ ಇರಲಿಲ್ಲ. ಹೇಳಿಕೊಳ್ಳುವಂಥ ಔದ್ಯಮಿಕ ಅಭಿವೃದ್ಧಿಯಿರಲಿಲ್ಲ. ಆದರೆ ಅಲ್ಲಿ ನಡೆದಿರುವ ಕಾರ್ಖಾನೆಗಳೇ ಮೊದಲಾದ ಉದ್ಯಮಗಳಲ್ಲಿ ದುಡಿಯುವವರು ರಾಜಕೀಯ ಪರಿಜ್ಞಾನವುಳ್ಳವರೂ ಶಿಸ್ತುಳ್ಳವರೂ ಆಗಿದ್ದರು. ಬೋಲ್ಶೆವಿಕ್ ಪಕ್ಷದ ನಾಯಕನಾಗಿ ಲೆನಿನ್ ಮುಂದೆ ಬಂದ. ಆದರೆ ಅವನ ಪ್ರಯತ್ನಕ್ಕೆ ಯಶ ಬಂದುದು ೧೯೧೪ ರಲ್ಲಿ ಪ್ರಾರಂಭವಾದ ಪ್ರಥಮ ಜಾಗತಿಕ ಮಹಾಯುದ್ಧವು ಮುಗಿತಾಯಕ್ಕೆ ಬರುವ (ಎಂದರೆ ೧೯೧೮ ಕ್ಕೆ) ಸ್ವಲ್ಪ ಪೂರ್ವದಲ್ಲಿ. ೧೯೧೭ರ ನವೆಂಬರಿನಲ್ಲಿ ಬೋಲ್ಶೆವಿಕರು ಲೆನಿನ್–ಟ್ರಾಟ್‌ಸ್ಕಿಯವರ ನೇತೃತ್ವದಲ್ಲಿ ರಶಿಯದಲ್ಲಿ ಕಮ್ಯುನಿಸ್ಟ್ ರಾಜ್ಯ ಕ್ರಾಂತಿಯನ್ನು ಜರುಗಿಸಿದರು. ಈ ಕ್ರಾಂತಿಯನ್ನೂ ವ್ಯಾವಹಾರಿಕವಾಗಿ ಫಲಪ್ರದ ಮಾಡಿದ ಶ್ರೇಯಸ್ಸು ಲೆನಿನ್ನನಿಗಿದೆ. ಸಾಮ್ಯವಾದೀ ಸೈದ್ಧಾಂತಿಕ ಮಾರ್ಗಗಳ ನಿಷ್ಠುರ ಆಚರಣೆಯಿಂದ ಹಾಗೂ ಅತಿರೇಕದಿಂದ (ಉದಾ: ಹೊಲಗಳ ವೈಯಕ್ತಿಕ ಒಡೆತನ ನಷ್ಟಗೊಳಿಸಿ ಸಾಮೂಹಿಕ ಕೃಷಿ ಕ್ಷೇತ್ರಗಳನ್ನು ನಿರ್ಮಿಸಿ) ರಾಜ್ಯಯಂತ್ರ ನಿಂತು ಬಿಡುವದಾಗಿ ಕಂಡಕೂಡಲೇ ಆತ ಮತ್ತೆ ರೈತರಿಗೆ ಅವರವರ ಹೊಲ ಒಪ್ಪಿಸಿ ಕೃಷಿಯನ್ನು ವಿಕೇಂ–ದ್ರೀಕರಿಸಿ ಅವರ ಅನುರಾಗವನ್ನು ಪಡೆದನು. ಹೀಗೆ (ಮುಖ್ಯ ಕಮ್ಯುನಿಸ್ಟ್ ಕೇಂದ್ರಿತ ರಾಜ್ಯಾಧಿಕಾರ ಪದ್ಧತಿಗೆ ಬಾಧೆ ಬಾರದಂತೆ) ಇನ್ನೂ ಕೆಲವು ಇಷ್ಟವಾದ ಬದಲಾವಣೆಗಳನ್ನು ಮಾಡಿದನು. ಆದರೆ ಲೆನಿನ್ನನು ತೀರಿದ ತರುವಾಯ (೧೯೨೪) ಬಂದ ಸ್ಟಾಲಿನ್ನನು ಕಠೋರ ಕಮ್ಯುನಿಸ್ಟ್ ನಿಯಂತ್ರಣವನ್ನು ಜನತೆಯ ಮೇಲೆ ಹೇರಿದನು. ಜನತೆಗೆ ಇದ್ದ ಬಿದ್ದ ಅಲ್ಪ ಸ್ವಲ್ಪ ಸ್ವಾಯತ್ತತೆ. ಸ್ವಾತಂತ್ರ್ಯಗಳು ನಷ್ಟವಾದವು. ಸ್ಟಾಲಿನ್ನನೊಡನೆ ಸಹಮತರಾಗದ್ದ, ಸಮರಸರಾಗದ ವಿರೋಧಿಗಳು ನಿರ್ದಯವಾಗಿ ಕೊಲೆ ಮಾಡಲ್ಪಟ್ಟರು. ಗುಪ್ತಚಾರರ ಪೋಲೀಸರ ಸಹಾಯದಿಂದ ಆತ ಆಳಿದನು. ಆತನ ತರುವಾಯ ಅಧಿಕಾರಕ್ಕೆ ಬಂದ ಕ್ರುಶ್ಚೇವ್ ಹೆಚ್ಚು ಉದಾರಮತವಾದಿಯಾಗಿದ್ದನು. ಆತನು ವಿಶ್ವ ಶಾಂತಿಗೆ ಪೋಷಕವಾದ ವಿದೇಶ ನೀತಿಯನ್ನನು–ಸರಿಸಿದನು. ಆದರೆ ಅಂತರ್ಗತ ರಾಜಕೀಯದಲ್ಲಿ ಬಿಗುವಿನ ಹಾಗೂ ಕೇಂದ್ರೀಕೃತ ಆಡಳಿತ(ಮೊದಲಿನಷ್ಟು ಕಠೋರವಿರದಿದ್ದರೂ) ಇದ್ದೇ ಇದ್ದಿತು.

ದ್ವಿತೀಯ ಮಹಾಯುದ್ಧದ ಪರಿಣಾಮಗಳ ಫಲವಾಗಿ ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿತು. ಏಶಿಯದ ಇಂಡೋಚೀನ, ಬ್ರಹ್ಮದೇಶ, ಮಲಯಾ, ಇಂಡೋನೇಶಿಯಾ ಮೊದಲಾದ ಜನಾಂಗಗಳು ಚೇತರಿಸಿದವು; ಚೀನದಲ್ಲಿಯ ಮಾವೋ ಕಲಹದಲ್ಲಿ ಕಮ್ಯುನಿಸ್ಟರ ಮೇಲ್ಗೈಯಾಗಿ ಜಗತ್ತಿನ ಅತಿ ಶಾಂತಿಪ್ರಿಯ ಪೂರ್ವಜರ ಅನೂಚಾನ ಶಿಷ್ಟಾಚಾರಗಳನ್ನೂ ಶ್ರದ್ಧೆಯಿಂದ ಅನುಸರಿಸುತ್ತ ಬಂದಿದ್ದ ಆ ದೇಶವು ತನ್ನ ಅಂತರ್ಗತ ಸಾಮಾಜಿಕ ಜೀವನವನ್ನು ಕಮ್ಯುನಿಸ್ಟ್ ಎರಕದಲ್ಲಿ ನಿರ್ಘೃಣವಾಗಿ ಎರಕ ಹೊಯ್ದುದಲ್ಲದೆ ನಗ್ನ ಆಕ್ರಮಕ ವಿದೇಶ ನೀತಿಯನ್ನು ಅನುಸರಿಸುತ್ತ ಬಂದಿತು. ತಿಬೇಟವನ್ನು ನಿರ್ದಯವಾಗಿ ನುಂಗಿದುದಲ್ಲದೆ, ಭಾರತದ ಸೀಮೆಯ ಮೇಲೂ ಅಭಿಯೋಗ ಮಾಡಿತು. ಸ್ವಾಮೀಜಿ ಭವಿಷ್ಯ ನುಡಿದಂತೆ ಚೀನದಲ್ಲಿ ಶೂದ್ರಕ್ರಾಂತಿ ನಡೆಯಿತು. ಭಾರತದ ಅಭ್ಯುತ್ಥಾನ ಯಾವ ದಾರಿಯಲ್ಲಿ ನಡೆದೀತೆಂಬುದನ್ನು ಕಾದು ನೋಡೋಣ.

# ಮಂತ್ರವೋ ಮಾಟವೋ ಮೋಸವೋ?

ಉದಯ ಜಾದೂಗಾರ್

ಯಕ್ಷಿಣಿಗಾರನೆಂದರೆ ಭೂತ, ಪ್ರೇತ, ಪಿಶಾಚಿಗಳನ್ನು ವಶಪಡಿಸಿಕೊಂಡು ಅವುಗಳ ಸಹಾಯದಿಂದ ಅಸಾಧ್ಯವಾದುದನ್ನು ಸಾಧಿಸುವವ ಎಂಬ ನಂಬಿಕೆ ಇನ್ನೂ ಬಹಳಷ್ಟು ಜನರಲ್ಲಿ ಆಳವಾಗಿ ಬೇರೂರಿದೆ. ಈ ಭಾವನೆಯನ್ನು ದುರುಪಯೋಗಪಡಿಸಿಕೊಳ್ಳಲಾಗುತ್ತಿದೆ ಎನ್ನುವುದಕ್ಕೆ ಈ ಕೆಳಗಿನ ಕೆಲವು ಘಟನೆಗಳೇ ಸಾಕ್ಷಿ.

ರಸ್ತೆಯ ಬದಿಯಲ್ಲೊಬ್ಬ ದೊಂಬರಾಟ ನಡೆಸುತ್ತಿದ್ದಾನೆ. ಮೂರು ಬಟ್ಟಲುಗಳನ್ನು ಅವುಗಳ ಬಾಯಿ ಕೆಳಗಾಗಿರುವಂತೆ ನೆಲದ ಮೇಲೆ ಇಟ್ಟಿದ್ದಾನೆ. ಒಂದು ಬಟ್ಟಲಿನ ಕೆಳಗೆ ಒಂದು ಚಿಕ್ಕ ಚೆಂಡನ್ನು ಇಡುತ್ತಾನೆ. ಯಕ್ಷಿಣಿಗಾರ ಸೂಚನೆ ನೀಡಿದೊಡನೆ ಚೆಂಡು ಒಂದು ಬಟ್ಟಲಿನಿಂದ ಇನ್ನೊಂದು ಬಟ್ಟಲಿಗೆ, ಇನ್ನೊಂದರಿಂದ ಮತ್ತೊಂದಕ್ಕೆ ಸಂಚರಿಸಿ ಕೊನೆಗೆ ಅದೃಶ್ಯವಾಗುತ್ತದೆ. ಚಿಕ್ಕ ಬಾಲಕನೊಬ್ಬ ಬೆಕ್ಕಸಬೆರಗಾಗಿ ಅದನ್ನೇ ನೋಡುತ್ತಿದ್ದಾನೆ. ಅವನ ಮನಸ್ಸೆಲ್ಲಾ ಅದರಲ್ಲೇ ಲೀನವಾಗಿದೆ. ಹೇಗಾದರೂ ಮಾಡಿ ತಾನೂ ಹಾಗೆ ಮಾಡಲು ಕಲಿಯಬೇಕೆಂಬ ಆಸೆ ಕ್ಷಣ ಕ್ಷಣಕ್ಕೂ ಬಲಿಯುತ್ತದೆ.

ಇದಾವುದರ ಪರಿವೆಯೂ ಇಲ್ಲದ ಯಕ್ಷಿಣಿಗಾರ ಮಾಮೂಲಿನಂತೆ ಇದನ್ನು ಕಟ್ಟಿಕೊಂಡರೆ ಅದೃಷ್ಟ ಖುಲಾಯಿಸುವುದೆಂದು ಲೋಕಕ್ಕೆ ಬೇರಿನ ತಾಯಿತವನ್ನು ನೆರೆದ ಜನರಿಗೆ ಮಾರುತ್ತಾನೆ. ಜನಸಂದಣಿ ಕರಗಿದ ನಂತರ ಬಾಲಕ ತನ್ನ ಆಸೆಯನ್ನು ದೊಂಬರಾಟದವನಲ್ಲಿ ತೋಡಿಕೊಳ್ಳುತ್ತಾನೆ. ಆಗ ದೊಂಬರವ, "ಎರಡು ದಿನ ಮೂತ್ರವಾಡದೇ ಆ ನಂತರ ನನ್ನ ಬಳಿ ಬಾ, ಹೇಳಿ ಕೊಡುತ್ತೇನೆ. ಬರುವಾಗ ಐನೂರೂಪಾಯಿಗಳನ್ನು ದಕ್ಷಿಣೆಯಾಗಿ ತೆಗೆದು ಕೊಂಡು ಬಾ," ಎಂದು ಹೇಳುತ್ತಾನೆ. ವಾಸ್ತವವಾಗಿ ದೊಂಬನಿಗೆ ಈ ವಿದ್ಯೆಯನ್ನು ಹೇಳಿ ಕೊಡುವ ಮನಸ್ಸಿಲ್ಲ. ಹೇಗೂ ಎರಡು ದಿನ ಮೂತ್ರ ತಡೆಯಲು ಯಾರಿಂದಲೂ ಅಸಾಧ್ಯ; ಅದ್ದರಿಂದ ಈ ಬಾಲಕ ಮತ್ತೊಮ್ಮೆ ಬರಲಾರ ಎಂಬ ಲೆಕ್ಕಾಚಾರ ಆತನದು. ಆದರೆ ಬಾಲಕ ಹಠವಾದಿ. ಅಸಾಧ್ಯ ನೋವನ್ನು ಸಹಿಸಿ ಕಷ್ಟಪಟ್ಟು ಎರಡು ದಿನ ಮೂತ್ರ ತಡೆದು ಇನ್ನು ತಡೆಯಲು ಅಸಾಧ್ಯವೆನಿಸಿದಾಗ ದೊಂಬನನ್ನು ಭೇಟಿಯಾದ. ಅಪ್ಪ-ಅಮ್ಮ ಆಗಾಗ ಕೊಟ್ಟ ದುಡ್ಡನ್ನೆಲ್ಲಾ ಗೋಲಕದ ಡಬ್ಬಿಯಲ್ಲಿ ಕೂಡಿಟ್ಟಿದ್ದ ಆತ ಇಪ್ಪತ್ತೈದು ರೂಪಾಯಿಗಳನ್ನು ಅವನ ಕೈಯಲ್ಲಿ ಕೊಟ್ಟ. ಈಗ ದೊಂಬನಿಗೆ ಪೇಚಾಟ, ಹೇಗೆ ಈ ಬಾಲಕನನ್ನು ಸಾಗಹಾಕುವುದು ಎಂದು. ಮಧ್ಯ ರಾತ್ರಿ ಸರಿಯಾಗಿ ಊರ ಹೊರಗಿರುವ ಸ್ಮಶಾನಕ್ಕೆ ಬಾ ಅಲ್ಲಿ ಮಂತ್ರ ಹೇಳಿಕೊಡುತ್ತೇನೆ. ಎಂದು ಹೇಳಿದ. ಅದರಂತೆ ಬಾಲಕ ಅಲ್ಲಿಗೆ ಹೋದ. ನಿನ್ನ ಅಂಗಿಯನ್ನು ಬಿಚ್ಚಿ ಕಾಳಿತಾಕೋ ಎಂದ ದೊಂಬರವ. ಬಾಲಕ ಹಾಗೆಯೇ ಮಾಡಿದ. ಕಣ್ಣು ಮುಚ್ಚಿ ಕು

ಬೂಂ' ಎಂದು ಐನೂರು ಸಲ ಹೇಳು. ಕಣ್ಣು ಬಿಚ್ಚಿಕೋ ಬೇಡ ಎಂದ. ನಡುಗುವ ಚಳಿಯಲ್ಲಿ ಜಪಿಸುತ 'ಓಂ ಬೂಂ' ಎಂದು ಮಂತ್ರ ಪಠಿಸುತ್ತಾ ಕುಳಿತು ಮಂತ್ರ ಮುಗಿದ ನಂತರ ನೋಡುವಾಗ ಬೊಂಬರವನ ಪತ್ತೆಯೇ ಇಲ್ಲ. ನಿರಾಶೆಯಿಂದ ಹಿಂತಿರುಗಿದ ಬಾಲಕ.

ಆ ಬಾಲಕನೇ ನಾನು. ಹೀಗೆ ಮುಗ್ಧ ಜನರನ್ನು ನಾನಾ ರೀತಿಯಲ್ಲಿ ಮೋಸಮಾಡುತ್ತಾರೆ ಈ ಜನ.

ನಾನಾಗ ಬಿಜಾಪುರದಲ್ಲಿ ಪ್ರದರ್ಶನ ಕೊಡುತ್ತಿದ್ದೆ. ಅಲ್ಲಿ ಇದ್ದಕ್ಕಿದ್ದಂತೆ ಒಬ್ಬ ಯುವತಿ ಏನನ್ನೂ ತಿನ್ನದೆ ಕುಡಿಯದೆ ಮೌನವಾಗಿ ಇರ ತೊಡಗಿದಳು. ಅವಳ ಮನೆಯವರಿಗೆ ಗಾಬರಿ. ಏನಾಯಿತೆಂದರೆ ಈಕೆ ಹೇಳಲೊಲ್ಲಳು. 'ಕೃಷ್ಣ ಪೂಜಾರಿಯನ್ನು ಕರೆಸಿ; ಆತ ಸರಿಮಾಡುತ್ತಾನೆ,' ಎಂದು ಯಾರೋ ಹೇಳಿದರು. ಆತ ಬಂದವನೇ, 'ಇವಳ ಮೇಲೆ ಪಂಜುರ್ಲಿ ಭೂತ ಬಂದಿದೆ.' ನೋಡಿ. ಈಗ ತಿಳಿಯುತ್ತದೆ ಎಂದು ಕೈಲಿದ್ದ ಬೂದಿಯನ್ನು ಅವಳ ಮೈಮೇಲೆ ಎರಚಿದ. ಕೂಡಲೇ ಯುವತಿ ತನ್ನ ಮೈಯನ್ನು ಪರಚಿ ಕೊಳ್ಳತೊಡಗಿದಳು. ಜನ ಭೂತ ಮೈಮೇಲೆ ಬಂತು ಎಂದು ಬಿಟ್ಟಗಣ್ಣಿಂದ ನೋಡತೊಡಗಿದರು. ಪೂಜಾರಿಯ ಹೂಟವೆಲ್ಲ ನನಗೆ ಗೊತ್ತು. ಜನಜಂಗುಳಿಯ ಮಧ್ಯೆ ನುಗ್ಗಿ ಪೂಜಾರಿಯ ಕೈಲಿದ್ದ ಬೂದಿಯನ್ನು ಕಸಿದುಕೊಂಡು ಅವನ ಮೈಮೇಲೆಯೇ ಎರಚಿಬಿಟ್ಟೆ. ಈ ಅನಿರೀಕ್ಷಿತ ದಾಳಿಯಿಂದ ಆತ ಕಂಗಾಲಾದ. ಅರೆಕ್ಷಣದಲ್ಲಿ ಆತನೂ ತನ್ನ ಮೈಯನ್ನು ಪರಚಿಕೊಳ್ಳಲು ಶುರುಮಾಡಿದ. ಅಲ್ಲಿದ್ದ ಜನರಿಗೆ, 'ನೋಡಿ ಅವಳ ಮೈಮೇಲಿದ್ದ ಭೂತ ಇವನ ಮೇಲೆ ಬಂದಿದೆ' ಎಂದೆ. ಆ ಪೂಜಾರಿ ಅಲ್ಲಿಂದ ಪರಾರಿಯಾದ. ನಿಜವಾಗಿಯೆಂದರೆ ಅವರಿಬ್ಬರು ಮೈ ಪರಚಿ ಕೊಳ್ಳಲು ಕಾರಣ ಪಂಜುರ್ಲಿ ಭೂತ ಅಲ್ಲ. ಆ ಬೂದಿಯಲ್ಲಿರುವ ಮೈತುರಿಸುವಂಥ ನಸುಗುನ್ನಿ ಪುಡಿ. ಆ ಯುವತಿ ಮೌನವಾಗಿರಲು ಕಾರಣ ಆಕೆ ಭಗ್ನ ಪ್ರೇಮಿಯಾದದ್ದು. ಆ ಯುವತಿಯ ಸ್ಥಿತಿಯನ್ನು ನೋಡಿ ಅವಳ ತಂದೆ ತಾಯಿಗಳಿಗೆ ಅವಳನ್ನು ಆಸ್ಪತ್ರೆಗೆ ಕಳುಹಿಸುವಂತೆ ಕೇಳಿಕೊಂಡೆ.



ಉದಯ ಜಾದೂಗಾರ

**ಶಿವಮೊಗ್ಗದ ಈ ತರುಣ ತಮ್ಮ ತಂದೆಯಾದ ರಮೇಶರಾವ್ ಅವರಿಂದ ಇಂದ್ರಜಾಲದಲ್ಲಿ ಆಸಕ್ತಿ ತಳೆದು, ಅದನ್ನೇ ಅಭ್ಯಸಿಸಿ, ಕೊನೆಗೆ ಕೆಲವು ಪ್ರಸಿದ್ಧ ಜಾದೂಗಾರರಲ್ಲಿ ಕಲಿತು ಈಗ ತಮ್ಮದೇ ಆದ ಒಂದು ಕ್ಷೇತ್ರವನ್ನು ಸೃಷ್ಟಿಸಿಕೊಂಡಿದ್ದಾರೆ. ಫೋಟೋಗ್ರಾಫಿ ವೃತ್ತಿಯ ಮನೆತನದ ಈ ಬಿ. ಕಾಂ. ಪದವೀಧರ ೧೬ನೆಯ ವರ್ಷದಲ್ಲೇ ಕಣ್ಣು ಕಟ್ಟಿಕೊಂಡು ಸೈಕಲ್ ನಡೆಸಿ ಜನಮನ ಗೆದ್ದವರು. ಬೆಂಗಳೂರಿನಲ್ಲಿ ಸತತ ೨೦೦ ದಿನ ಮಾತನಾಡುವ ಗೊಂಬೆ 'ಹ್ಯಾರಿ'ಯ ಮೂಲಕ ಪ್ರೇಕ್ಷಕರನ್ನು ಗೆದ್ದುಕೊಂಡವರು.**

**ಮೂಢ ನಂಬಿಕೆಗಳಿಂದ, ಮೋಸದಿಂದ ಸಾಮಾನ್ಯರನ್ನು ವಂಚಿಸುವಂಥ ಕೆಲವು ಘಟನೆಗಳನ್ನು ತಾವು ಬಯಲಿಗೆಳೆದುದನ್ನು ಇಲ್ಲಿ ವಿವರಿಸಿದ್ದಾರೆ.**

ಕೆಲಕಾಲದ ನಂತರ ನನಗೆ ಅವರಿಂದ ಬಂತು.

ಇನ್ನೊಬ್ಬ ಪೂಜಾರಿ ತನ್ನ ರಾತ್ರಿ ಕನಸಿನಲ್ಲಿ ಶಿವ ಬಂದು ನಾಳೆ ಊರ ಮುಂದಿರುವ ಮಾವಿನ ಮರದ ಕೆಳಗೆ ಲಿಂಗವೊಂದು ತನ್ನಷ್ಟಕ್ಕೆ ಉದ್ಭವವಾಗುತ್ತದೆ, ಎಂದು ಹೇಳಿ ಅದೃಶ್ಯನಾದನೆಂದು ಹೇಳಿದ. ಈ ಸುದ್ದಿ ಜನರ ಕರ್ಣೋಪಕರ್ಣವಾಗಿ ಊರ ತುಂಬಾ ಹಬ್ಬಿತು. ನನಗೂ ಕುತೂಹಲ ತಡೆಯಲಾರದೆ ಬೆಳಿಗ್ಗೆ ಮಾವಿನ ಮರದ ಕೆಳಗೆ ನೆರೆದಿದ್ದ ಸಾವಿರಾರು ಪ್ರೇಕ್ಷಕರಲ್ಲಿ ಸೇರಿಕೊಂಡೆ. ಪೂಜಾರಿ ಮಂತ್ರ ಪಠಿಸುತ್ತಾ ನೆಲದ ಮೇಲೆ ನೀರನ್ನು ಸುರಿಸುತ್ತಲೇ ಇದ್ದ. ಸುಮಾರು ೩ ಗಂಟೆಯ ನಂತರ ಜನರ ತಾಳ್ಮೆಗೆ ಮೆಚ್ಚಿಯೋ ಎಂಬಂತೆ ಶಿವಲಿಂಗ ನಿಧಾನವಾಗಿ ಭೂಮಿಯನ್ನು ಬಿರಿದು ಮೇಲೆ ಬಂತು. ಇಂಥಾ ಅಲೌಕಿಕ ಲಿಂಗವನ್ನು ಹಾಗೆಯೆ ಬಿಡಲು ಸಾಧ್ಯವೆ? ಅದಕ್ಕೊಂದು ಮಂದಿರ ಬೇಡವೆ? ಕೂಡಲೇ ಮರಿ ಪೂಜಾರಿಗಳು ತಟ್ಟೆಯನ್ನು ಹಿಡಿದು ಮನೆ ಮನೆಗೆ ಹೊರಟರು. ದೇಗುಲ ಕಟ್ಟಲು ಸುಮಾರು ೨೫ ಸಾವಿರದಷ್ಟು ಚಂದಾ ಹಣ ಸಂದಾಯವಾಯಿತು.

ಹೇಗಾದರೂ ಮಾಡಿ ಈ ರಹಸ್ಯವನ್ನು ಭೇದಿಸಬೇಕೆಂದು ನಾನೂ ನನ್ನ ಸ್ನೇಹಿತರೂ ಯೋಚಿಸಿದೆವು. ಪೂಜಾರಿಯ ಮಗನನ್ನು ಹಿಡಿದು ಸಾಮ, ದಾನಗಳಿಂದ ಆತನ ಬಾಯಿಯನ್ನು ಬಿಚ್ಚಿಸಿದೆವು.

ಆತ ಹೇಳಿದ್ದೇನೆಂದರೆ, ರಾತ್ರಿಯೇ ನೆಲದಲ್ಲಿ ಸಣ್ಣ ಹೊಂಡವನ್ನು ತೋಡಿ ಕೆಳಭಾಗದಲ್ಲಿ ಸಾಕಷ್ಟು ಕಡಲೆ ಕಾಳುಗಳನ್ನು ಹಾಕಿ ಅದರ ಮೇಲೆ ಹಗುರವಾದ ಲಿಂಗವನ್ನಿಟ್ಟು ಮೆಲ್ಲಗೆ ನಿಧಾನವಾಗಿ ಮಣ್ಣನ್ನು ಹರಡಿಬಿಟ್ಟಿದ್ದರು. ಬೆಳಿಗ್ಗೆ ನೀರನ್ನು ಆ ಮಣ್ಣಿನ ಮೇಲೆ ಹಾಕುತ್ತಾ ಹೋದಾಗ ಕಡಲೆ ನೆನೆದು ದೊಡ್ಡದಾಗುತ್ತಾ ಹೋದಂತೆ ಲಿಂಗ ಮೇಲಕ್ಕೆ ಬಂತು.

ರಸ್ತೆಯ ಪಕ್ಕ ಫಕೀರನೊಬ್ಬ ಕುಳಿತಿದ್ದಾನೆ. ಆತನ ಎದುರಿನಲ್ಲಿ ಬಟ್ಟೆಯ ಮೇಲೆ ಬಣ್ಣ ಬಣ್ಣದ ಹರಳುಗಳಿವೆ. ನೆರೆದ ಪ್ರೇಕ್ಷಕರಲ್ಲಿ ಒಬ್ಬರಿಗೆ ಯಾವುದಾದರೂ ಒಂದು ಹರಳನ್ನು ಆರಿಸಿಕೊಳ್ಳಲು ಹೇಳುತ್ತಾನೆ. ಪ್ರೇಕ್ಷಕ ತಾನು ಆರಿಸಿಕೊಂಡ ಹರಳನ್ನು ಮುಷ್ಟಿಯಲ್ಲಿ ಹಿಡಿದು ಕೊಳ್ಳುತ್ತಾನೆ. ಫಕೀರ ಸ್ವಲ್ಪ ಸುಣ್ಣವನ್ನು ಪ್ರೇಕ್ಷಕನ ಕೈಗೆ ಹಚ್ಚುತ್ತಾನೆ. ಆ ಸುಣ್ಣ ಕೆಂಪು ಬಣ್ಣವಾಗಿ ಪರಿವರ್ತಿಸಿದರೆ ಆ ಹರಳು ಆ ಪ್ರೇಕ್ಷಕನ ಅದೃಷ್ಟದ ಹರಳು ಎಂದರ್ಥ. ಆಗ ಆತ ಬೇಕಾದರೆ ಫಕೀರ ಹೇಳಿದಷ್ಟು ಬೆಲೆ ತೆತ್ತು ಹರಳನ್ನು ತೆಗೆದುಕೊಳ್ಳಬೇಕು, ಇಲ್ಲದಿದ್ದರೇನಿಲ್ಲ.

ಎಲ್ಲರ ಕೈಗೆ ಹಚ್ಚಿದ ಸುಣ್ಣ ಕೆಂಪಾಗುವುದಿಲ್ಲ. ಕೆಲವರಿಗೆ ಮಾತ್ರ (ನೋಡಲು ಸಾಹುಕಾರರಾಗಿ ಕಂಡಲ್ಲಿ) ಹಾಗಾಗುತ್ತದೆ. ಇದಕ್ಕೆ ಕಾರಣ ಹರಳಲ್ಲಿ ಇರುವ ಶಕ್ತಿಯಲ್ಲ, ಫಕೀರ ವಾಸ್ತವವಾಗಿ ತನ್ನ ಕಿರುಬೆರಳಿಗೆ ಯಾವುದಾದರೂ ಔಷಧಿ ಅಂಗಡಿಯಲ್ಲಿ ಸಿಗುವ ಭೇದಿ ಮಾತ್ರೆ ಬರ್ಗೋಲೆಕ್ಸನ್ನು ಹಚ್ಚಿಕೊಂಡಿರುತ್ತಾನೆ. ಸುಣ್ಣ ಕೆಂಪಾಗಬೇಕು ಎಂದು ಆತ ಬಯಸಿದಲ್ಲಿ ನಿಮ್ಮ ಕೈಗೆ ಸುಣ್ಣದೊಡನೆ ಅದನ್ನು ಹಚ್ಚುತ್ತಾನೆ. ಆಗ ರಸಾಯನಿಕ ಕ್ರಿಯೆಯಿಂದ ಸುಣ್ಣ ಕೆಂಪಾಗುತ್ತದೆ.

ರಸ್ತೆಯ ಬದಿಯಲ್ಲಿ ಕುಳಿತಿರುವ ಒಬ್ಬ ಕೈಯಲ್ಲಿ ಹಲವಾರು ಬಿಳಿ ಕಾಗದಗಳನ್ನು ಹಿಡಿದುಕೊಂಡಿದ್ದಾನೆ. ನೀವು ೨೫ ಪೈಸೆಯನ್ನು ಕೊಟ್ಟು ಅದರಲ್ಲಿರುವ ಯಾವುದಾದರೂ ಒಂದು ಕಾಗದವನ್ನು ಆರಿಸಿ ಆತನ ಕೈಯಲ್ಲಿ ಕೊಡಿ. ಆತ ಅದನ್ನು ಬೆಂಕಿಯ ಮೇಲೆ ಹಿಡಿಯುತ್ತಾನೆ. ಆಗ ಆ ಕಾಗದದ ಮೇಲೆ ನಿಮ್ಮ ಭವಿಷ್ಯ ಮೂಡುತ್ತದೆ. ನೀವು ಅಗ್ನಿ ಬರೆದ ಭವಿಷ್ಯ ಎಂದು ಸಂತೋಷಪಡುತ್ತೀರಿ.

ಕಾಗದದ ಮೇಲೆ ಅಕ್ಷರ ಹೇಗೆ ಮೂಡಿತು ಎಂದು ನೀವು ಎಂದಾದರೂ ಯೋಚಿಸಿದ್ದಿರಾ?

ಅದು ಹೇಗೆ ಮೂಡುತ್ತದೆಂದರೆ ಮೊದಲೇ ಪೆನ್ನಿನಲ್ಲಿ ಶಾಯಿಯ ಬದಲಾಗಿ ಲಿಂಬೆ ಹಣ್ಣಿನ ರಸವನ್ನೋ ನೀರುಳ್ಳಿ ರಸವನ್ನೋ ತುಂಬಿ ಅದರಿಂದ ಆತ ನಿಮ್ಮ ಭವಿಷ್ಯವನ್ನು ಬರೆದಿರುತ್ತಾನೆ. ಅದು ಬಿಸಿಯಾದಾಗ ಮಾತ್ರ ಗೋಚರಿಸುತ್ತದೆ. ಈಗ ನಿಮಗೂ ತಿಳಿಯಿತಲ್ಲವೆ, ಪ್ರೇಮಪತ್ರಗಳನ್ನು ಇನ್ನು ಗುಪ್ತವಾಗಿ ಲಿಂಬೆ ರಸದಲ್ಲಿ ನೀವು ಬರೆಯಬಹುದು ಎಂದು. ●

## ಹೈ ಪವರ್ ಸರ್ಫ್ ಅಪರಿಮಿತ ಬೆಳ್ಳಗೆ ಒಗೆಯುತ್ತದೆ...

ಅದು ಪ್ರತ್ಯಕ್ಷ ಕಾಣುತ್ತದೆ

ಹೈ ಪವರ್ ಸರ್ಫ್‌ನಲ್ಲಿ ಅಧಿಕ ಒಗೆಯುವ ಶಕ್ತಿ ಇದೆ; ಧೂಳು, ಕೊಳೆ ಎಲ್ಲವನ್ನೂ ಸಂಪೂರ್ಣವಾಗಿ ತೆಗೆದುಹಾಕಿಬಿಡುತ್ತದೆ. ಅತ್ಯಂತ ಕೊಳೆಯಾದ ಬಟ್ಟೆಗಳನ್ನು ಕೂಡ ಅದು ಅಪರಿಮಿತ ಬೆಳ್ಳಗೆ ಮಾಡುತ್ತದೆ. ಹೆಚ್ಚಿನ ತಾಯಂದಿರು ಬೇರೆ ಯಾವುದೇ ವಾಶಿಂಗ್ ಪೌಡರ್‌ಗಿಂತ ಅಧಿಕವಾಗಿ ಸರ್ಫ್‌ನ್ನು ಉಪಯೋಗಿಸುತ್ತಿರುವುದರಲ್ಲಿ ಆಶ್ಚರ್ಯವೇ ಇಲ್ಲ.






**ಹೆಚ್ಚಿನ ತಾಯಂದಿರು ಬೇರೆ ಯಾವುದೇ ವಾಶಿಂಗ್ ಪೌಡರಿಗಿಂತ ಅಧಿಕವಾಗಿ ಹೈ ಪವರ್ ಸರ್ಫ್‌ನ್ನು ಉಪಯೋಗಿಸುತ್ತಾರೆ**



ರಾಮಣ್ಣ ಆರ್ದೆಜೆ

ಮ್ಯೂನಿಚ್ ನಗರದಲ್ಲಿ ಜಿಗ್‌ಮುಂಡ್ ಆಡಂ ಒಬ್ಬ ನ್ಯಾಯವಾದಿ. ಪ್ರಾಕ್ಟೀಸ್ ಚೆನ್ನಾಗಿ ನಡೆಯುತ್ತಿತ್ತು. ೧೯೬೭ರ ನವೆಂಬರ್ ತಿಂಗಳು ೧೫ನೇ ತಾರೀಖಿನಂದು ಜಿಗ್‌ಮುಂಡ್ ಕೋರ್ಟಿನ ಕಾಗದಗಳನ್ನು ನೋಡುವುದರಲ್ಲಿ ಮಗ್ನನಾಗಿದ್ದ. ಇದ್ದಕ್ಕಿದ್ದಂತೆ ಕೋಣೆಯಲ್ಲಿರುವ ಟ್ಯೂಬ್‌ಲೈಟ್ 'ಟಪ್' ಎಂದು ಒಡೆದು ಚೂರುಚೂರಾಯಿತು. ಮರುಕ್ಷಣದಲ್ಲಿಯೇ ಆ ಕೋಣೆಯಲ್ಲಿರುವ ಇನ್ನುಳಿದ ಮೂರು ನಾಲ್ಕು ಸಾಮಾನ್ಯ ಬಲ್ಬುಗಳು ಕೂಡ ಒಡೆದು ಚೂರು ಚೂರಾದವು. ಇದನ್ನು ಕಂಡು ಅಲ್ಲಿದ್ದವರೆಲ್ಲ ಭಯಗೊಂಡು ಹೊರಗೋಡಿದರು. ಅನಂತರ ಎಲೆಕ್ಟ್ರೀಷಿಯನ್ನನ್ನು ಕರೆದಾಗ ಆತ ಅವುಗಳನ್ನೆಲ್ಲಾ ಪರೀಕ್ಷಿಸಿ ಎಲ್ಲಾ ಸರಿಯಾಗಿವೆ ಎಂದು ಹೇಳಿ ಹೊಸ ಬಲ್ಬುಗಳನ್ನು ಕೂಡಿಸಿ ಹೋಗಿಬಿಟ್ಟ. ಇದು ಜರುಗಿದ ಮೂರು ದಿನಗಳ ನಂತರ ಸರಿಯಾಗಿ ಹನ್ನೆರಡು ಗಂಟೆಗೆ ಪುನಃ ಬಲ್ಬುಗಳೆಲ್ಲಾ ಸುಟ್ಟುಹೋದವು. ಆಗ ಜಿಗ್‌ಮುಂಡ್ ತನಗೆ ಪರಿಚಯವಿದ್ದ ಎಲೆಕ್ಟ್ರಿಕಲ್ ಇಂಜಿನಿಯರರನ್ನು ತನ್ನ ಆಫೀಸಿಗೆ ಕರೆದುಕೊಂಡು ಬಂದು ಪರೀಕ್ಷೆ ಮಾಡಿಸಿದ. ಅವರೂ ಎಲ್ಲಾ ಸರಿಯಾಗಿದೆ; ಇದರಲ್ಲಾವ ಲೋಪವೂ ಇಲ್ಲವೆಂದು ಹೇಳಿದರು.

ತನ್ನ ಆಫೀಸಿನಲ್ಲಿ ಜರುಗುತ್ತಿರುವ ಈ ಘಟನೆಗಳ ಬಗ್ಗೆ ವಿಚಾರಮಗ್ನನಾಗಿ ಕುಳಿತ ಸಮಯದಲ್ಲಿ ಪೋಸ್ಟ್‌ಮನ್ ಬಂದು ಕೆಲ ಪತ್ರಗಳ ಜೊತೆ ಕರೆಂಟ್ ಬಿಲ್ಲನ್ನೂ ಕೊಟ್ಟು ಹೋದ. ಬಿಲ್ಲು ನೋಡಿ ಜಿಗ್‌ಮುಂಡ್ ಒಂದೇ ಏಟಿಗೆ ಕುರ್ಚಿಯಿಂದ ನೆಗೆದು ಬಿದ್ದ. ಪ್ರತಿಸಲಕ್ಕಿಂತಲೂ ಎಷ್ಟೋ ಪಟ್ಟು ಬಿಲ್ ಹೆಚ್ಚಾಗಿತ್ತು. ಆತ ನಿಜವಾಗಿ ಅಷ್ಟೊಂದು ಕರೆಂಟ್ ಬಳಸಿರಲಿಲ್ಲ. ಹಾಗಾದರೆ ಬಿಲ್ ಹೇಗೆ ಹೆಚ್ಚಾಯಿತು? ಬೇರೆ ಯಾರದ ಬಿಲ್ ತನಗೆ ಬಂದಿದೆಯೋ ಏನೋ ಎಂಬ ಅನುಮಾನದಿಂದ ಬಿಲ್ಲಿನ ಮೇಲೆ ಕಣ್ಣಾಡಿಸಿದ. ಬಿಲ್ಲಿನಲ್ಲಿ ಆತನ ಹೆಸರೇ ಇತ್ತು. ತತ ಕ್ಷಣವೇ ಜಿಗ್‌ಮುಂಡ್ ಮುನಿಸಿಪಲ್ ಆಫೀಸಿನ ಎಲೆಕ್ಟ್ರಿಕಲ್ ಆಫೀಸಿಗೂ ಹೋಗಿ ತನ್ನ ಆಫೀಸಿನ ಮೀಟರಿನಲ್ಲಿರುವ ಲೋಪದೋಷವನ್ನು

ದೊಂದೇ ಅಲ್ಲದೆ ಎಲೆಕ್ಟ್ರಿಕ್ ಮೀಟರಗಳು ವೇಗವಾಗಿ ಓಡುವಂತೆ ಮಾಡುವದು, ಬಲ್ಬುಗಳು ಒಡೆಯುವಂತೆ ಮಾಡುವದು ಕೂಡ ಸಾಧ್ಯವೆಂದು ಆತ ಹೇಳಿದ.

ಹತ್ತೊಂಭತ್ತು ವರ್ಷದ ಮೇರಿ ತುಂಬಾ ಸುಂದರಿಯಾಗಿದ್ದಳು. ಮ್ಯೂನಿಕ್ ನಗರದ ಬಳಿಯಿರುವ ಒಂದು ಚಿಕ್ಕ ಹಳ್ಳಿಯಲ್ಲಿ ಜನಿಸಿ ಬಾಲ್ಯದಿಂದ ಅದೇ ಊರಿನಲ್ಲಿ ಬೆಳೆದು ಗ್ರಾಮ ಜೀವನಕ್ಕೆ ಹೊಂದಿಕೊಂಡಿದ್ದಳು. ಅದೇ ತರುಣದಲ್ಲಿ ಮೇರಿಯ ತಂದೆ ಅವಳನ್ನು ಜಿಗ್‌ಮುಂದನ ಆಫೀಸಿನಲ್ಲಿ ಕೆಲಸಕ್ಕೆ ಸೇರಿಸಿದಾಗ ಪಟ್ಟಣದ ವಾತಾವರಣವನ್ನು ಇಷ್ಟಪಡದ ಮೇರಿಗೆ ತುಂಬಾ ಬೇಜಾರಾಯಿತು. ಮುಂಜಾನೆಯಿಂದ ರಾತ್ರಿ ಮಲಗುವವರೆಗೂ ಯಾಂತ್ರಿಕವಾಗಿ ಸಾಗುತ್ತಿರುವ ತನ್ನ ಪಟ್ಟಣದ ಜೀವನಕ್ಕೆ ವಿದಾಯ ಹೇಳಿಬಿಡಬೇಕೆಂದು ಮೊದಲಿನಿಂದಲೂ ಪ್ರಯತ್ನಿಸುತ್ತಿದ್ದಳು. ಮೇರಿಯನ್ನು ಪರೀಕ್ಷಿಸಿದ ಬೆಂಡರ್ ಪಟ್ಟಣದ ವಾತಾವರಣವನ್ನು ಸಹಿಸಲಾರದೆ ಮೇರಿ ಜಿಗ್‌ಮುಂದನ ಆಫೀಸಿನಲ್ಲಿ ಕುಳಿತ ಕೃತ್ರಿಮವಾಗಿ ಹೊರಹೊಮ್ಮುತ್ತಿರುವ ಪ್ರಕಾಶವನ್ನು ಅಸಹ್ಯಪಟ್ಟುಕೊಳ್ಳುವದೇ ಆ ಕೋಣೆಯಲ್ಲಿ ಬಲ್ಬುಗಳು ಒಡೆಯುವದಕ್ಕೆ ಕಾರಣವೆಂದು ಕಂಡುಹಿಡಿದರು. ಬಲ್ಬುಗಳು ಒಡೆದಾಗ ಮಾತ್ರ ತುಂಬಾ ಚೆನ್ನಾಯಿತು ಎಂದು ಅವಳು ಸಂತೋಷಪಡುತ್ತಿದ್ದಳು. ಈ ರೀತಿ ಕೋಣೆಯಲ್ಲಿ ಬಲ್ಬುಗಳು ಒಡೆಯುವದಕ್ಕೆ ಕಾರಣ ತಾನೇ ಎಂದು ಮೇರಿ ಎಂದೂ ಊಹಿಸಿರಲಿಲ್ಲ. ಈ ವಿಷಯ ತಿಳಿದಕೂಡಲೆ ಜಿಗ್‌ಮುಂದ್ ಆಕೆಯನ್ನು ತನ್ನ ಆಫೀಸಿನಿಂದ ತೆತ್ತಿ ಹಾಕಿದ. ಮೇರಿ ಕೂಡ ಪೀಡೆ ತೊಲಗಿತೆಂದು ತಕ್ಷಣ ತನ್ನ ಊರಿಗೆ ಪ್ರಯಾಣ ಬೆಳೆಸಿದಳು.

ಮೇರಿ ಯುಕ್ತ ವಯಸ್ಸಿಗೆ ಬರುತ್ತಲೇ ಒಬ್ಬ ಯುವಕನನ್ನು ಪ್ರೀತಿಸುತ್ತಿದ್ದಳು. ಇದು ಎಲ್ಲರಿಗೂ ಗೊತ್ತಿತ್ತು. ಜಿಗ್‌ಮುಂದನ ಆಫೀಸಿನಲ್ಲಿ ಜರುಗಿದ ಘಟನೆ ಆ ಯುವಕನಿಗೆ ತಿಳಿಯುತ್ತಲೇ ಭಯಗೊಂಡು ಅತ ಇನ್ನೊಬ್ಬಳನ್ನು ಪ್ರೀತಿಸಲು ಮೊದಲು ಮಾಡಿದ. ಒಮ್ಮೆ ಆ ಇಬ್ಬರೂ ಪ್ರೇಮಸಲ್ಲಾಪದಲ್ಲಿ ತೊಡಗಿದಾಗ ತಟ್ಟನೆ ಅವರು ಮೇರಿಯ ಕಣ್ಣಿಗೆ ಬಿದ್ದರು. ಅವಳು ಕೋಪಾವೇಶದಿಂದ ಅವರಿಬ್ಬರನ್ನು ತೀಕ್ಷ್ಣವಾಗಿ ನೋಡಿದಳು. ಮರುಕ್ಷಣದಲ್ಲಿಯೇ ಅವರಿರುವ ಕೋಣೆಯಲ್ಲಿರುವ ವಸ್ತುಗಳು ಕದಲಿದವು. ಗೋಡೆಯನ್ನಲಂಕರಿಸಿದ ಫೋಟೋಗಳು ನೆಲದ ಮೇಲೆ ಬಿದ್ದು ಒಡೆದವು. ಭಯಂಕರವಾಗಿ ಅವಳ ನೋಟವನ್ನು ತಾಳಲಾರದೆ ಅವರಿಬ್ಬರೂ ಗರಬಡಿದವರಂತೆ ನಿಂತಲ್ಲೆ ನಿಂತರು. ತನ್ನನ್ನು ಮೋಸಗೊಳಿಸಿದ್ದಕ್ಕಾಗಿ ತಕ್ಕ ಶಿಕ್ಷೆ ಅನುಭವಿಸುತ್ತೀಯೆಂದು ಹೇಳಿ ಅಲ್ಲಿಂದ ಆಕೆ ಕಣ್ಮರೆಯಾದಳು. ಇದಾದ ಕೆಲವು ದಿನಗಳ ಆನಂತರ ಇನ್ನೊಬ್ಬ ಯುವತಿ ಕಾರು ಅಪಘಾತದಲ್ಲಿ ತೀರಿ ಹೋದಳು.

ನಂತರ ಮೇರಿ ಮತ್ತೊಬ್ಬ ಯುವಕನನ್ನು ಮದುವೆಯಾದಳು. ಮಕ್ಕಳಾದ ಕೆಲವು ದಿನಗಳ ನಂತರ ಅವಳಲ್ಲಿನ ಈ ರಹಸ್ಯಮಯ ಶಕ್ತಿ ತಂತಾನೆ ಉಡುಗಿ ಹೋಯಿತು.

ಲೂಸಿಯಾ ರೈನ್* ಎಂಬ ಪ್ರಖ್ಯಾತ ಅತೀಂದ್ರಿಯ ಮನೋವಿಜ್ಞಾನಿ ತನ್ನ 'ಮೈಂಡ್ ಓವರ್ ಮ್ಯಾಟರ್' ಎಂಬ ಗ್ರಂಥದಲ್ಲಿ ಈ ಶಕ್ತಿಯ ಬಗ್ಗೆ ಹೇಳುತ್ತಾ ಆಶ್ಚರ್ಯ, ಅದ್ಭುತ, ಅಸಾಧ್ಯವೆನಿಸುವ ಘಟನೆಗಳನ್ನೆಷ್ಟೋ ತಾನು ತನ್ನ ಪತಿ ಡಾಕ್ಟರ್ ಜೆ. ಬಿ. ರೈನರೊಡನೆ ಅಧ್ಯಯನ ಮಾಡಿದ್ದೇನೆಂದೂ ಅವರಲ್ಲಿ ಯಾವ ರೀತಿಯ ಮೋಸವಿಲ್ಲವೆಂದೂ ಹೇಳಿದ್ದಾಳೆ.

ಮನಸ್ಸಿಗಿರುವ ಶಕ್ತಿಯನ್ನು ಮಾತಿನಲ್ಲಿ ವರ್ಣಿಸುವದು ಅಸಾಧ್ಯವೆಂದು ಮಾನವ ತನಗಿರುವ ಬಾಹ್ಯ ಅಂಗಗಳಿಂದ ಎಷ್ಟು ಕಾರ್ಯಗಳನ್ನು ಮಾಡಬಹುದೋ ಅವೆಲ್ಲವನ್ನೂ ತನ್ನ ಮನಸ್ಸಿನಿಂದ ಮಾಡಬಹುದೆಂದೂ ಅವಶ್ಯವೆನಿಸಿದರೆ ಇದಕ್ಕಿಂತ ಹೆಚ್ಚಿನದನ್ನು ಸಾಧಿಸಬಹುದೆಂದೂ ರೈನ್ ಹೇಳುತ್ತಾಳೆ. ಒಬ್ಬ ವ್ಯಕ್ತಿ ಏಕಾಗ್ರತೆಯಿಂದ ಸಾಧನೆ ಮಾಡಿದರೆ ಇಂಥ ಕಾರ್ಯಗಳು ಬಹಳ ಸುಲಭವೆಂದೂ ಆಕೆ ಹೇಳಿದ್ದಾಳೆ.

ಎರಡು ಗಂಟೆಯ ಸಮಯ. ಸುಡು ಬಿಸಿಲ ಜ್ವಾಲೆಯಲ್ಲಿ ತಾಸುಗಟ್ಟಲೆ ಅಲೆದಾಡಿ ಮಾನಸಿಕವಾಗಿಯೂ ಶಾರೀರಕವಾಗಿಯೂ ಬಳಲಿ ಬೆಂಡಾದ ಶರೀರ. ಜೊತೆಗೆ ಭೋರ್ಗರೆಯುತ್ತಿದ್ದ ಕ್ಷುಧಾಗ್ನಿ ಅಸಹನೀಯವಾಗಿತ್ತು. ಕಾತರದಿಂದ ಹೊರಳಾಡುತ್ತಿದ್ದ ನೇತ್ರಗಳಿಗೆ ಗೋಚರಿಸಿದ ಖಾನಾವಳಿಯ ವರ್ಣರಂಜಿತ ನಾಮಫಲಕ, ಕ್ಷಿಪ್ರ ಗತಿಯಲ್ಲಿ ಜಠರಕೋಶದ ಸ್ನಾಯುಗಳ ಕ್ರಿಯೆಯನ್ನು ಮತ್ತಷ್ಟು ತ್ವರಿತಗೊಳಿಸಿತು. ಸೋತ ಕಾಲುಗಳನ್ನೆಳೆಯುತ್ತಾ, ಇಳಿಯುತ್ತಿದ್ದ ಬೆವರನ್ನೊರೆಸಿಕೊಳ್ಳುತ್ತಾ ಅತ್ತ ಸಾಗಿದೆ.

ಕ್ರಮವಾಗಿ ಜೋಡಿಸಿಟ್ಟಿದ್ದ ಮೇಜು ಖುರ್ಚಿಗಳ ಮಧ್ಯೆ ಒಂದೆಡೆ ಕುಳಿತು, ಎದುರಿದ್ದ ಕೂಜಾದಿಂದ ಒಂದಿಷ್ಟು ನೀರನ್ನು ಗಂಟಲಿಗೆ ಸುರಿದುಕೊಂಡೆ. ಹೊಸ ಚೈತನ್ಯ ಉಂಟಾದಂತಾಯಿತು. ಖುರ್ಚಿಯ ಬೆನ್ನಿಗೊರಗಿ ಸುತ್ತಲೂ ಒಮ್ಮೆ ನೋಡಿದೆ. ಅಲೌಕಿಕ ಲಾವಣ್ಯದಿಂದ ಕೂಡಿದ ಸುಂದರಿಯೊಬ್ಬಳು ಮೂಲೆಯ ಖುರ್ಚಿಯಲ್ಲಿ ಏಕಾಂಗಿಯಾಗಿ ಕುಳಿತು, 'ಥಮ್ಸ್ ಅಪ್' ಹೀರುವುದರಲ್ಲಿ ಮಗ್ನಳಾಗಿದ್ದಳು. ಆಕೆಯ ಅದ್ವಿತೀಯ ಸೌಂದರ್ಯ ಚುಂಬಕದಂತೆ ನನ್ನನ್ನಾಕರ್ಷಿಸಿತು. ಸುಮಾರು ಹದಿನೆಂಟರ ಹರಯದ ಚಿತ್ತಾಕರ್ಷಕ ರೂಪದ ಮನಮೋಹಕ ನಿಲುವಿನ ಸುಕೋಮಲ ತರುಣಿ. ಆಕರ್ಷಕ ಬಟ್ಟಲುಗಂಗಳು, ಬೆಳದಿಂಗಳು ಘನರೂಪಗೊಂಡಂತಹ ಮೈಬಣ್ಣ, ಚಿತ್ರದಲ್ಲಿ ಕಾಣುವಂತಹ ನೀಳವಾದ ಬೆರಳುಗಳು. ಬಳ್ಳಿಯಂತೆ ಬಾಗುವ ಶರೀರ, ಸ್ವೇಚ್ಛೆತನ್ನ ಚಿಮ್ಮುವ ಸುಕುಮಾರ ಅಂಗಾಂಗಗಳು ಗಾಂಭೀರ್ಯ ತುಂಬಿ ತುಳುಕುವ ಅನುಪಮ ಚಿತ್ತವೇಧಕ ವ್ಯಕ್ತಿತ್ವ. ಸೃಷ್ಟಿಯಲ್ಲಿ ಸುಂದರವಾದ ಯಾವುದೇ ಪದಾರ್ಥವನ್ನು ನೋಡಿ, ಮೆಚ್ಚಿ ಆನಂದಿಸುವುದು ಅಪರಾಧವೇನಲ್ಲವಲ್ಲ! ತರುಣಿಯ ಮುಖದ ಮೇಲೆ ಲಾಸ್ಯವಾಡುತ್ತಿದ್ದ ವಯಸ್ಸಿಗೆ ಮೀರಿದ ಗಾಂಭೀರ್ಯ, ನಿಷ್ಕಳಂಕ ಮುಗ್ಧ ಮುಖ, ಸಖಿಯರೊಡನೆ ಸರಸವಾಡುತ್ತಾ ಇರಬೇಕಾದ ಈ ಸಮಯ, ಈ ವಯಸ್ಸಿನಲ್ಲಿ ಈಕೆ ಏಕಾಕಿನಿಯಾಗಿ ಒಂದು ಮೂಲೆಯಲ್ಲಿ ಕುಳಿತು ವಿಚಾರಮಗ್ನಳಾದ ರೀತಿಯನ್ನು ನೋಡಿ ನನ್ನಲ್ಲೀ ಆಕೆಯ ಬಗ್ಗೆ ಏನೋ ಒಂದು ಬಗೆಯ ಆಕರ್ಷಣೆ ಉತ್ಪನ್ನವಾಯಿತು. ಮೆಚ್ಚುಗೆಯಿಂದ ಅಂತರ್ಯ ಉದ್ಗರಿಸಿತು, 'ಹಾ ಎಂಥ ಸೌಂದರ್ಯ! ಎಂಥ ಲಾವಣ್ಯ! ಯಾವುದೇ ಒಂದು ಸಣ್ಣ ಲೋಪವೂ ಇಲ್ಲದ ಪರಿಪೂರ್ಣ ಸೌಂದರ್ಯ! ಓಹ್! ಈಕೆಯೇನಾದರೂ ನನ್ನ...' ಅಷ್ಟರಲ್ಲಿ ಆಕೆ ಕುಳಿತಲ್ಲಿಂದ ಎದ್ದಳು. ಎದ್ದವಳು ಕುಂಟರಾದವರು ನಡೆಯಲು ಉಪಯೋಗಿಸುವ ಒಂದು ರೀತಿಯ ಮರದ ಏಣಿಯಂತಹ ರಚನೆಯನ್ನು ಎರಡು ಕಂಕುಳುಗಳಿಗೂ ಸಿಕ್ಕಿಸಿ, ತನ್ಮೂಲಕ ಕುಂಟುತ್ತಾ ಕೌಂಟರಿನತ್ತ ಸಾಗತೊಡಗಿದಾಗ, ಇಡೀ ಪ್ರಪಂಚವೇ ಕಣ್ಮುಂದೆ ಸುತ್ತಿದಂತಾಗಿ ಕಂಗಳಿಗೆ ಕತ್ತಲೆ ಕವಿಯಿತು.

— ಕೆ. ಎ. ರಹೀಮ್

ನನ್ನ ಮಿತ್ರ ಆಗ ಅದೇ ತಾನೆ ಪುಣೆಯಲ್ಲಿ ಬಿ.ಎಡ್. ಮುಗಿಸಿ ಇಂಟರ್‌ವ್ಯೂಗೆಂದು ಸೊಲ್ಲಾಪುರಕ್ಕೆ ಬಂದಿದ್ದ. ಆಗ ಅವನಿಗೆ ಆದ ಅನುಭವವನ್ನು ಅವನ ಮಾತಿನಲ್ಲೆ ಕೇಳಿ:

"ನನಗೆ 'The Lamb' ಕವಿತೆಯನ್ನು ಮುಂದೆ ಕುಳಿತ ವಿದ್ಯಾರ್ಥಿಗಳಿಗೆ ವಿವರಿಸಲು ಹೇಳಲಾಯಿತು. ಎಂದೂ ಓದದ ಕವಿತೆಯನ್ನು ವಿವರಿಸುವಾಗ ಮಧ್ಯದಲ್ಲಿ lad ಎಂಬ ಶಬ್ದ ಬಂದಿತು. ಒಡನೆಯೇ ಒಬ್ಬ ವಿದ್ಯಾರ್ಥಿ ಎದ್ದು ನಿಂತು, 'Lad ಶಬ್ದದ ಅರ್ಥ ಏನು ಸಾರ್'?' ಎಂದು ಕೇಳಿದ. ನನಗೆ ಆ ಶಬ್ದದ ಪರಿಚಯವಿಲ್ಲದ್ದರಿಂದ ಕೈಕಾಲುಗಳು ಒಂದು ಕ್ಷಣ ಕಂಪಿಸಿದವು. ಆದರೂ ಧೈರ್ಯ ತಂದುಕೊಂಡು ಆ ವಿದ್ಯಾರ್ಥಿಗೆ, 'ಮಧ್ಯದಲ್ಲಿ ಹೀಗೆ ಕೇಳಬಾರದು. ಇದರಿಂದ mood off ಆಗುತ್ತದೆ. ಕೊನೆಗೆ ನಿಮಗೆ ಎಲ್ಲವನ್ನೂ ವಿವರಿಸುತ್ತೇನೆ,' ಎಂದು ಆ ಹುಡಗನಿಗೆ ಹೇಳಿ ಕವಿತೆಯನ್ನು ಮುಂದುವರಿಸಿದೆ. ಅನಂತರ ಸಾಂಗವಾಗಿ ಕವಿತೆಯನ್ನು ಮುಗಿಸಿ ಮುಗುಳ್ನಗೆಯಿಂದ, ಏನಾದರೂ ಸಂಶಯವಿದ್ದರೆ ಕೇಳಬಹುದು ಎಂದು ಎಲ್ಲರ ಕಡೆ ದೃಷ್ಟಿ ಹಾಯಿಸಿ, ಇನ್ನು ಕುಳಿತುಕೊಳ್ಳಬೇಕು ಎನ್ನುವಷ್ಟರಲ್ಲಿಯೇ ಮತ್ತೆ ಅದೇ ವಿದ್ಯಾರ್ಥಿ ಎದ್ದು ನಿಂತು, ಮೊದಲಿನ ಪ್ರಶ್ನೆಯನ್ನೇ ಕೇಳಿದ. ನಾನು ಹೇಳಿಕೊಡುವ ರೀತಿಯನ್ನು ವೀಕ್ಷಿಸುತ್ತಿದ್ದ ಕಮಿಟಿಯ ಸದಸ್ಯರು ನನ್ನ ಕಡೆಗೊಮ್ಮೆ ಪ್ರಶ್ನಾರ್ಥಕವಾಗಿ ನೋಡಿದರು. ನಾನು ಭೂಮಿಗೆ ಇಳಿದೇ ಹೋದೆ. ಅಷ್ಟರಲ್ಲೆ ಒಂದು ಉಪಾಯ ಹೊಳೆಯಿತು. ನಿಂತ ಹುಡುಗ ನನ್ನು ಕೂಡಲು ಹೇಳಿ, 'ನಿಮ್ಮ ಮಿತ್ರನಿಗೆ lad ಶಬ್ದದ ಅರ್ಥ ಗೊತ್ತಿಲ್ಲವಂತೆ; ನಿಮ್ಮಲ್ಲಿ ಯಾರಿಗಾದರೂ ಗೊತ್ತಿದೆಯೆ? ಗೊತ್ತಿದ್ದರೆ ಕೈಯೆತ್ತಿ' ಎಂದಾಗ ಅಲ್ಲಲ್ಲಿ ನಾಲ್ಕೈದು ಕೈಗಳು ಕಂಡವು. ಮನಸ್ಸಿಗೆ ಸ್ವಲ್ಪ ಸಂತೋಷವಾಯಿತು. ಕೈ ಎತ್ತಿದವರಲ್ಲಿ ಒಬ್ಬನನ್ನು ಎಬ್ಬಿಸಿ ಕೇಳಲಾಗಿ, 'ಹುಡುಗ' ಎಂದುತ್ತರಿಸಿದ. ಇದೇ ಸರಿಯೆಂದು ನನಗೇನು ಗೊತ್ತು! ಮತ್ತೊಬ್ಬನನ್ನು ಎಬ್ಬಿಸಿ, 'ಇದು ಸರಿಯೆ?' ಎಂದು ಕೇಳಿದೆ. ಅವನು ಸರಿಯೆಂದು ತಲೆಯಾಡಿಸಿದ. ಹೀಗೆ ಆ ಎಲ್ಲ ಕೈ ಎತ್ತಿದ ವಿದ್ಯಾರ್ಥಿಗಳನ್ನು ಪರೀಕ್ಷಿಸುವಂತೆ ಕೇಳುತ್ತ, ನನ್ನ ಸಂದೇಹವನ್ನು ಪರಿಹರಿಸಿಕೊಳ್ಳುತ್ತಿದ್ದೆ. ಎಲ್ಲರೂ ಒಂದೇ ಉತ್ತರ ಕೊಟ್ಟು, ನನ್ನ ಸಂದೇಹ ಪರಿಹಾರವಾಗಿ, ಆ ಪ್ರಶ್ನೆ ಕೇಳಿದ ವಿದ್ಯಾರ್ಥಿಯೆಡೆ ತಿರುಗಿ, 'ತಿಳಿಯಿತೇ?' ಎಂದು ಕೇಳಿದೆ. ಅವನು ತಿಳಿಯಿತೆಂಬಂತೆ ಸ್ವಲ್ಪ ತಲೆಯಲ್ಲಾಡಿಸಿ ಕುಳಿತ. ನನ್ನ 'ಜಾಣ್ಮೆ'ಗೆ ಕಮಿಟಿಯ ಸದಸ್ಯರು ತಲೆ ದೂಗಿದರು. ಅಲ್ಲಿ ನನಗೆ ನೌಕರಿ ಸಿಕ್ಕಿತೆಂದು ಬೇರೆ ಹೇಳಬೇಕಾಗಿಲ್ಲವಷ್ಟೆ?"

—ಸುಧೀಂದ್ರ ಕುಲಕರ್ಣಿ

ದಿಲ್ಲಿ ನಗರ ಸಾರಿಗೆ ಬಸ್ಸುಗಳಲ್ಲಿರುವಷ್ಟು ದಟ್ಟಣೆ ಬಹುಶಃ ದೇಶದ ಇನ್ನಾವ ನಗರದಲ್ಲೂ ಆಗಲಿಕ್ಕಿಲ್ಲ. ದಟ್ಟಣೆ ವಿಪರೀತವಾದಾಗ ಕನಿಷ್ಠ ನಾಲ್ಕಾರು ಜನ ಚಾಲಕನ ಬದಿಯ ಎಂಜಿನ್ ಬಾನೆಟ್ಟಿನ ಮೇಲೆ ಕುಳಿತುಬಿಡುತ್ತಿದ್ದರು. ಚಾಲಕರು ಎಷ್ಟು ಬಿನ್ನವಿಸಿದರೂ ಪ್ರಯಾಣಿಕರ ಮೇಲಾಗಲಿಲ್ಲ. ಕೊನೆಗೊಬ್ಬ ಚಾಲಕನಿಗೆ ಒಂದು ವಿಚಾರ ಹೊಳೆದು ಅವನು ಅದಕ್ಕೆ ತಟ್ಟನೆ ಕೃತಿಯಲ್ಲಿ ತಂದ. ಬಾನೆಟ್ಟಿನ ಮೇಲೆ ದೇಶದ ಪ್ರಮುಖ ಧರ್ಮಗಳೆಲ್ಲವುಗಳ ಸಂಕೇತಗಳನ್ನು ವಿವಿಧ ವರ್ಣಗಳಲ್ಲಿ ಚಿತ್ರಿಸಿದ. ಅಂದಿನಿಂದ ಅವನ ಬಸ್ಸಿನ ಬಾನೆಟ್ಟಿನಿಂದ ಜನ ಭಯ-ಭಕ್ತಿಪೂರ್ವಕವಾಗಿ ದೂರ ಸರಿದು ನಿಲ್ಲತೊಡಗಿದರು.

—ಸುರೇಶ ನಾರಾಯಣನ್

ಪುಸ್ತಕ ವಿಭಾಗ




# ಜೇಬುಗಳ್ಳರು

ತೆಲುಗು ಮೂಲ: ಡಪ್ಪುರ ಶ್ರೀ ತಯ್ಯಾ

ಕನ್ನಡಾನುವಾದ: ಸುಬ್ರಹ್ಮಣ್ಯ ಜೋಯಿಸ

ಚಿತ್ರ: ಲಕ್ಷ್ಮೀ ಪಟ್ಟದ

ದೊಡನೆ, ಇವನಂತಹ ಇಪ್ಪತ್ತೈದು ಸಾವಿರ ಮಂದಿ ನಿರುದ್ಯೋಗಿಗಳೊಡನೆ ತನ್ನದೊಂದು ಹಾಕೆ ಸೇರಿಸಬೇಕೆಂದು ಬಂದೊಡನೆ, ಕಳೆದ ವರ್ಷದಿಂದ ಓದು ಬಿಟ್ಟು ತಮ್ಮ ಗುತ್ತಿಗೇದಾರಿ ವ್ಯವಹಾರದಲ್ಲಿ ತೊಡಗಿದ್ದ.

"ಯೂ ಆರ್ ಲಕ್ಕೀ: ಈ ಕಾಲೇಜ್ ಜೀವನ ಮತ್ತೆ ಈ ಜೀವನದಲ್ಲಿ ಸಿಗಲಾರದು. ಆಯ್ ಮಿಸ್ ಮೈ ಹಾಸ್ಟೆಲ್ ಲೈಫ್..."

"ಆಯ್ ಆಲ್ಸೊ ಮಿಸ್..." ನಾನವನಿಗೆ ದೊಡ್ಡಪ್ಪನವರಿಗೆ ವರ್ಗವಾದ ವಿಷಯ ತಿಳಿಸಿದೆ. ನಾಯಿಯ ಮಾತು ಮುಚ್ಚಿಟ್ಟು ಕೇವಲ ಇಷ್ಟೇ ಹೇಳಿದೆ: "ನನಗೆ ಹಾಸ್ಟೆಲಿನಲ್ಲಿ ಪುನಃ ಸೀಟು ಸಿಕ್ಕರೆ...!"

"ಮಿಡ್ ಟರ್ಮ್‌ನಲ್ಲಿ ಸಿಗಲಾರದು. ಹೊರಗೇಕೆ ಒಂದು ರೂಮು ಬಾಡಿಗೆಗೆ ಹಿಡಿಯುವುದಿಲ್ಲ, ಹೊಸ ಟರ್ಮಿನವರೆಗೆ?" ರೂಬಿ ತನಗೆಷ್ಟು ತಿಳಿಯುತ್ತದೆಯೊ ಅಷ್ಟು ತಿಳಿದುಕೊಳ್ಳುತ್ತಾನೆ. ಬಾಕಿ ಮಾತುಗಳ ಬಗ್ಗೆ ಅವನು ವಿಚಾರಿಸುವುದೇ ಇಲ್ಲ. ನಾನು ದೊಡ್ಡಪ್ಪನವರ ಹತ್ತಿರ ಇರಬಯಸುವುದಿಲ್ಲ ಎಂಬುದನ್ನು ಅವನು ತಿಳಿದುಕೊಂಡಿದ್ದ. ಮತ್ತು ಅದೇ ಅಪೇಕ್ಷವಾಗಿತ್ತು.

"ರೂಮು ಸಿಕ್ಕರೆ ಹಿಡಿಯಬಹುದು. ಅದರ ದುಬಾರಿ."

ಒಂದು ಹಳೆಯ ಕಾಲದ ವಿಶಾಲ ಮಹಲಿನೆದುರಿನಲ್ಲಿ ರೂಬೀ ಕಾರು ನಿಲ್ಲಿಸಿದ. ಈ ಆಸ್ತಿಗೆ ರೂಬಿಯ ತಂದೆಯದೆಂದು ಗೊತ್ತಾಯಿತು. ಇನ್ನಾರು ತಿಂಗಳಲ್ಲಿ ಡಿಮಾಲಿಶ್ ಮಾಡುವುದಿತ್ತು. ಹಾಸ್ಟೆಲಿಂದ ಹೊರಗಿರಬಯಸುತ್ತಿದ್ದ ಆರ್ಟ್‌ನ ವಿನೋದ, ಅಶೋಕರೊಡನೆ, ನನ್ನ ವಾಸ್ತವ್ಯ ಇಲ್ಲೆಂದಾಯಿತು.

ನಾವು ಅಶೋಕ, ವಿನೋದರನ್ನು ಕರೆದುಕೊಂಡು ಮಹಲಿಗೆ ಬಂದಾದಮೇಲೆ, ಅಶೋಕ ಕಸಬರಿಗೆಯನ್ನು ಹಿಡಿದುಕೊಂಡು ಸಂತೋಷದಿಂದ ಕುಣಿಯುತ್ತಿದ್ದ ಮತ್ತು ರೂಬಿಗೆ ಪದೇ ಪದೇ ಹೇಳುತ್ತಿದ್ದ: "ವಾಟ್ ಎ ಬ್ರಿಲಿಯಂಟ್ ಐಡಿಯಾ...!"

ಅಶೋಕ, ವಿನೋದರ ಸಾಮಾನುಗಳು ಬಂದವು. ಅವನು ತೂಗು ಹಾಕಿದ ಅರ್ಧ ಮತ್ತು ಪೂರ್ಣವಾದ ಪೇಂಟಿಂಗುಗಳಿಂದ ಹಾಲ್ ಆರ್ಟ್ ಗ್ಯಾಲರಿಯಂತೆ ತೋರತೊಡಗಿತು. ನಾನು ನನ್ನ ದೊಡ್ಡಪ್ಪನವರ ಮನೆಗೆ ನನ್ನ ಸಾಮಾನು ತರಲು ಹೋದಾಗ ನನ್ನ ಮೂವರು ಗೆಳೆಯರು ನನ್ನ ಜೊತೆಗಿದ್ದರು. ನಾನು ದೊಡ್ಡಪ್ಪನವರಿಗೆ ಹೇಳುತ್ತಿದ್ದೆ, "ಅಲ್ಲಿ ನನ್ನ ಕ್ಲಾಸ್ ಫೆಲೋಸ್ ಜೊತೆಗಿದ್ದು ಓದಿದರೆ ಅಭ್ಯಾಸ ಚೆನ್ನಾಗಿ ಆಗುತ್ತದೆ, ಅದ್ದರಿಂದ ದೊಡ್ಡಪ್ಪಾಜಿ..."

ದೊಡ್ಡಪ್ಪಾಜಿ ಬಹಳ ಚಿಂತೆಯಲ್ಲಿದ್ದಂತಿತ್ತು.. ನಗರದಲ್ಲಿ ದೊಡ್ಡಪ್ಪಾಜಿಯ ಮನೆ ಇದ್ದೂ ಮಗ ಹೊರಗಿದ್ದರೆ ಜನ ಏನು ತಿಳಿದುಕೊಂಡಾರು? ನನ್ನ ಅಭ್ಯಾಸಕ್ಕೆ ಹೀಗೆ ಮಾಡುವುದು ಅಗತ್ಯ ಎಂದು ಸಮಾಧಾನ ಹೇಳುತ್ತಿದ್ದೆ...

ನನ್ನ ಕ್ಲಾಸ್‌ಮೇಟುಗಳ ಮಾತು ಸುಳ್ಳು. ಏಕೆಂದರೆ ನಾನು ಇಂಜಿನಿಯರಿಂಗ್ ಸ್ಟೂಡೆಂಟ್. ಅವರಿಬ್ಬರೂ ಆರ್ಟಿನವರು.

"ಒಳ್ಳೇದು. ನಿನಗೆ ಯೋಗ್ಯವೆನಿಸಿದಂತೆ ಮಾಡು..." ದೊಡ್ಡಪ್ಪಾಜಿ ಹೇಳಿದರು. ನಾನು ಹಾಸಿಗೆ ಪುಸ್ತಕ ಗಿಟಾರ್ ಎತ್ತಿಕೊಂಡೆ. ನನ್ನ ಮಿತ್ರರು ಅದನ್ನು ರೂಬಿಯ ಗಾಡಿಯಲ್ಲಿಡುತ್ತಿದ್ದರು. ನಾಯಿ ಇನ್ನೂ ಬೊಗಳುತ್ತಿತ್ತು. ದೊಡ್ಡಪ್ಪಾಜಿ ದಣಿದ ಧ್ವನಿಯಲ್ಲಿ ಅನ್ನುತ್ತಿದ್ದರು—"ಶಟ್ ಅಪ್!... ಪ್ಲೀಜ್! ಶಟ್‌ಅಪ್...".

ಅವರು ನಾಯಿಗಲ್ಲ, ನನಗೆ ಹಾಗೆ ಹೇಳುತ್ತಿದ್ದಾರೆಂದು ನನಗೊಂದು ಸಲ ಅನಿಸಿತ್ತು—"ಪ್ಲೀಸ್, ಶಟ್ ಅಪ್."

## ೨

ವಿನೋದ, ಅಶೋಕ ಹಾಲಿನಲ್ಲಿ, ಅವರ ಬದಿಯ ಕೋಣೆಯಲ್ಲಿ ನಾನು ಮಲಗಿಕೊಂಡೆ. ಬಹಳ ಹೊತ್ತಿನ ತನಕ ಉರಿಯುತ್ತಿದ್ದ ಮೋಂಬತ್ತಿಯನ್ನು ನಿದ್ದೆ ಬರುವುದಿಲ್ಲವೆಂದು ನಂದಿಸಿದೆ. ಗಿಡಗಂಟಿಗಳ ಸರಸರ ಶಬ್ದದೊಡನೆ ಬೇರೆ ತರಹದ ವಿಲಕ್ಷಣ ಶಬ್ದಗಳಾಗುತ್ತಿದ್ದವು...ನಿದ್ರೆ ಬಂದಂತಾಗಿತ್ತು. ಯಾರೋ ವರಾಂಡದೊಳಗಿನಿಂದ ಹಾದು ಹೋದಂತೆನಿಸಿತು. ಬಾಗಿಲುಗಳು ಗಾಳಿಗೆ ತಾವೇ ತೆರೆದು, ಮುಚ್ಚಿ ಪಟ

ಎಷ್ಟೋ ಸಲ ಓಡಿ ಹೋಗಿ ತಲುಪಬೇಕಾಗುತ್ತಿತ್ತು. ನಮ್ಮ ಓಟ ನೋಡಿ ನಕ್ಕವರಿಗೆ ನಮ್ಮ ಉತ್ತರ ಸಿದ್ಧವಿತ್ತು– "ವಿ ಆರ್ ಫ್ಲರ್ಟಿಂಗ್ ವಿಥ್ ಟಾಯಿಮ್..."

ಪ್ರಸಿದ್ಧ ಪೇಂಟರನ ಮಗ ಅಶೋಕನಿಗೆ ಆ ಲೈನಿನಲ್ಲಿ ಒಂದಿಲ್ಲೊಂದು ಭವಿಷ್ಯ ಕಾದಿತ್ತು.

ಎಲ್ಲೆಡೆಯಿಂದಲೂ ನಿರಾಧಾರನಾಗಿದ್ದ ವಿನೀಗೆ ಡಿಪ್ರೆಶನ್ನಿನಿಂದ ಫಿಟ್ಸ್ ಬಂದಂತಾಗುತ್ತಿತ್ತು. ಆದರೆ ಪರೀಕ್ಷೆಯ ಈ ಟರ್ಮಿನಲ್ಲಿ ಒಳ್ಳೇ ಮೂಡಿನಲ್ಲಿ, ಕ್ಯಾನವಾಸಿಗೆ ಒಳ್ಳೆಯ ಪೇಂಟ್ ಹತ್ತದಿದ್ದರೂ ಅವನು ಹೇಳಬಲ್ಲವನಾಗಿದ್ದ. "ಐ ಆ್ಯಮ್ ಫ್ಲರ್ಟಿಂಗ್ ವಿಥ್ ದಿ ಫ್ಯೂಚರ್..."

ನಿಜವಾಗಿ ಈ ಸ್ಥಿತಿ ವಿನೀಯೊಬ್ಬನದೇ ಇರದೇ ನಮ್ಮೆಲ್ಲರದೂ ಇತ್ತು. ನಾವೆಲ್ಲರೂ ನಮ್ಮ ನಮ್ಮ ಫ್ಯೂಚರಿನೊಡನೆ ಫ್ಲರ್ಟ್ ಮಾಡುತ್ತಿದ್ದೆವು.

ಕಳೆದ ಸಲದ ಒಂದು ಪೇಪರ್ ಬಗ್ಗೆ ಸಂಶಯವಿತ್ತು. ಈ ಒಂದು ಪೇಪರ್ ಚೆನ್ನಾಗಿ ಆಗದಿದ್ದರೆ ಅಕ್ಟೋಬರಿನಲ್ಲಿ ಈ ಪೇಪರಿಗಾಗಿ ಪುನಃ ಪರೀಕ್ಷೆಗೆ ಕೂಡಬೇಕೆಂಬುದು ಗೊತ್ತಿತ್ತು.... ಅಕ್ಟೋಬರಿನಲ್ಲಿ ಕ್ಲಿಯರ್ ಆಗದಿದ್ದರೆ ಮಾರ್ಚಿನಲ್ಲಿ... ಸುರೇಂದ್ರ, ತಾಡನ್, ಅಜಯ್ ಇವರೆಲ್ಲರಿಗೂ ಕೋರ್ಸ್ ಮುಗಿಸಲು ಎಂಟು ಹತ್ತು ವರ್ಷ ಹಿಡಿದವಂತೆ.

ಇವು ತಾರುಣ್ಯ ಹಾಳಾಗುತ್ತಿರುವ ವರ್ಷಗಳು... ತಂದೆ ತಾಯಂದಿರ ಹಣ... ಇಷ್ಟು ಅಲ್ಲದೇ ದೇಶದಲ್ಲಿ ಇಪ್ಪತ್ತೈದು ಸಾವಿರ ನಿರುದ್ಯೋಗಿಗಳು ಎಂಬ ಸುದ್ದಿ... ನಿಜವಾಗಿಯೂ ನಾವೆಲ್ಲರೂ ನಮ್ಮ ಭವಿಷ್ಯದೊಡನೆ ಫ್ಲರ್ಟ್ ಮಾಡುತ್ತಿದ್ದೆವು–ಒಬ್ಬ ಕಡಿಮೆ ಡೆಸ್ಪರೇಟ್ಲೀ ಮತ್ತು ಮತ್ತೊಬ್ಬ ಹೆಚ್ಚು ಡೆಸ್ಪರೇಟ್ಲೀ...

೩

ಆಕಸ್ಮಾತ್ ಒಂದು ವಿಚಿತ್ರ ಸಂಗತಿ ನಡೆಯಿತು. ಎಂ. ಎ. ಫೈನಲ್ಲಿನ ಬ್ರಿಲಿಯಂಟ್

ರವಿಯ ಜೊತೆ ಮದುವೆ ಮಾಡಿಕೊಳ್ಳಲೇ ಬೇಕಾಯಿತು.

ಅವರಿಬ್ಬರಲ್ಲಿ ಸಾಧಾರಣ ಗೆಳೆತನವಿತ್ತು. ಗೆಳೆತನದ ಕಿರುಕಾಲ್ದಾರಿಯಲ್ಲಿ ಮದುವೆಯ ಗುಹೆ ಅಡ್ಡ ಬರುತ್ತದೆ. ಅದರಲ್ಲಿ ಆಶ್ರಯ ಪಡೆಯದೇ ಬೇರೆ ಉಪಾಯವಿರಲಿಲ್ಲ. ಎಂಬುದು ಅವರಿಗೆ ಗೊತ್ತಿರಲಿಲ್ಲ. ಮದುವೆಯ ಗವಿಯ ಹೊರಗೆ ಒಂದು ಕಡೆ ಕಾಲೇಜಿನಿಂದ ಎಕ್ಸ್‌ಪೆಲ್ ಆಗಿ ಇಬ್ಬರ ಕರಿಯರ್ ಮುಗಿದುಹೋಗುವಂತಹ ಕಂದಕವಿತ್ತು. ಇನ್ನೊಂದೆಡೆ ಕೈಗಳಲ್ಲಿ ಲಾಠಿಗಳನ್ನು ಹಿಡಿದು ನಿಂತ 'ಸೆಟಿಸ್ಟಿಕ್ ಗಾರ್ಡಿಯನ್ಸ್ ಆಫ್ ಅವರ್ ಕಲ್ಚರ್...'

ಕಂದಕದಲ್ಲಿ ಜಿಗಿಯುವಂತಿರಲಿಲ್ಲ. ಅವರಿಬ್ಬರೂ ಇಂಗ್ಲೀಷ್ ಲಿಟರೇಚರಿನ ಬ್ರಿಲಿಯಂಟ್ ಸ್ಟೂಡೆಂಟ್ಸರಿದ್ದರು. ಇನ್ನೊಂದು ಉಪಾಯವೆಂದರೆ ಸತ್ಯದಿಂದ, ಪ್ರಾರ್ಥನೆಯಿಂದ ಯುನಿವರ್ಸಿಟಿಯ ಅಧಿಕಾರಿಗಳ ಮನವೊಲಿಸಿ ಅವರು ಎಕ್ಸಪೆಲ್ ಆಗದಂತೆ ನೋಡಿಕೊಳ್ಳುವುದು. ಆದರೆ ಅವರ ಪ್ರಾರ್ಥನೆಯು ಫಲಿಸಲಿಲ್ಲ.

ಇನ್ನು ಮೂರನೇ ಮತ್ತು ಅಂತಿಮ ಮಾರ್ಗ ಒಂದೇ ಉಳಿದಿತ್ತು. ರವಿ ಮತ್ತು ಸವಿತಾ ಓಡಿ ಹೋಗಿ ಮದುವೆಯ ಗವಿಯಲ್ಲಿ ಸೇರಿಬಿಡುವುದು.

ಒಂದು ಸಾಯಂಕಾಲ ನಾವಿಷ್ಟು ಹುಡುಗ–ಹುಡುಗಿಯರು ಕಾಲುವೆ ದಂಡೆಯೆಡೆಗೆ ಹೋಗಿದ್ದೆವು. ಮೋಟಾರ್ ಬೈಕುಗಳಲ್ಲಿ ವಾಪಸಾಗುವಾಗ ಬೈಕಿನಿಂದ ಬಿದ್ದ ರವಿಗೆ ಸಾಕಷ್ಟು ಪೆಟ್ಟು ತಗಲಿತ್ತು. ಅವನೊಡನೆ ಬಹಳ ಸ್ನೇಹವಿದ್ದ ಸವಿತಾ, ಅವನ ಉಪಚಾರಕ್ಕಾಗಿ ಆ ರಾತ್ರಿ ಅವನ ರೂಮಿನಲ್ಲೇ ಉಳಿದುಕೊಂಡಳು.

ವಿಶ್ವಾಸದ ವಿಷಯ. ನಮಗಾರಿಗೂ ಅಪಾಯದ ಮಾತು ಹೊಳೆದಿರಲಿಲ್ಲ. ಸವಿತಾ ಮರುದಿನ ವಾರ್ಡನ್ನಿಗೆ ಕಾರಣ ಕೊಡುವಾಗ ಸುಳ್ಳು ಹೇಳಬೇಕೆಂಬ ವಿಚಾರವೇ ಆಕೆಗೆ ಹೊಳೆದಿರಲಿಲ್ಲ. ವಾರ್ಡನ್ ರಿಪೋರ್ಟ್ ಮಾಡಿಯೇಬಿಟ್ಟಳು: "ಅವನು ತೀರಾ ಪರಕೀಯ ಹುಡುಗ. ಅವನು ಸವಿತೆಯ ಸೋದರ, ಕಜಿನ್ ಅಥವಾ ಅವಳ

ಬಹುದಿತ್ತು…" ಈ ಸಮಸ್ಯೆಗೆ ಏನುತ್ತರ?

ಅವನು ಅವಳ ಸೋದರನಾಗುವಂತಿರಲಿಲ್ಲ. ಅವನು ವರ ಮಾತ್ರ ಆಗಬಹುದಿತ್ತು. ಅವರಿಬ್ಬರನ್ನೂ ಎಕ್ಸ್‌ಪೆಲ್ ಮಾಡುವ ಸಮಯ ಬಂದಾಗ, ತಮ್ಮಿಬ್ಬರ ಮದುವೆ ನಿಶ್ಚಯವಾಗಿದೆ ಎಂದೇ ಹೇಳಬೇಕಾಯಿತು.

ಆದರೆ ಪ್ರಸಂಗ ಎಲ್ಲಿಯವರೆಗೆ ಬಂತೆಂದರೆ, ಇಬ್ಬರ ತಾಯ್ತಂದೆಯರಿಂದ ನಿಜ ಸಂಗತಿಗಾಗಿ ಪತ್ರ ಬರೆಯುವ ವಿಚಾರದಲ್ಲಿದ್ದ ಅಧಿಕಾರಿಗಳು ಒಂದು ವೇಳೆ ವಿಚಾರಣೆಯಾದರೆ ಅವರಿಬ್ಬರ ಮಾತು ಸುಳ್ಳಾಗುವುದು…

ತಾಯ್ತಂದೆಯರಿಂದ ನಿಜ ಸಂಗತಿ ತಿಳಿಯುವ ಮುಂಚೆ, ತಾವು ಹೇಳಿದ್ದೂ ನಿಜವೆಂದು ಸಿದ್ಧ ಮಾಡಲಿಕ್ಕೆ ಅವರಿಬ್ಬರಿಗೂ ಬೇಗ ಮದುವೆ ಮಾಡಿಕೊಳ್ಳುವುದೊಂದೇ ಮಾರ್ಗ.




"ಇವರೇ ನನ್ನ ಮಕ್ಕಳು. ಒಬ್ಬಳ ಹೆಸರು ಸುಂದರಿ, ಎರಡನೆಯವಳು ಊರ್ವಶಿ. ಎಲ್ಲಾದರೂ ಎರಡು ವರ ಇದೆ, ನೋಡಿ ಇವರಿಗೆ."

ಅಧಿಕಾರಿಗಳ ಪತ್ರದಿಂದ ತನ್ನ ತಂದೆ ತಾಯಿ ಗಾಬರಿಯಿಂದ ಬಂದು ವೇಟಿಂಗ್ ರೂಮಿನಲ್ಲಿದ್ದ ಸಂಗತಿ ಸವಿತೆಗೆ ತಿಳಿಯಿತು.

ಎಲ್ಲರಿಂದ ಸಂಗ್ರಹವಾದ ಒಂದೂವರೆ ನೂರರಲ್ಲಿ ಕೂಡಲೇ ಎಲ್ಲರೂ ಒಂದಾಗಿ ಒಂದು ಮಂದಿರದಲ್ಲಿ ನಿರ್ವಿಘ್ನವಾಗಿ ಮದುವೆ ಮುಗಿಸಿದೆವು. ಒಬ್ಬ ಸವಿತೆಯ ಪರ ಸಾಕ್ಷಿಯಾದ. ಇನ್ನೊಬ್ಬ ರವಿಯ ಪರವಾಗಿ. ಪಂಡಿತ ಪುರೋಹಿತರು ಹತ್ತು ಹದಿನೈದು ನಿಮಿಷ ಮಂತ್ರ ಪಠಿಸಿ, ಎರಡು ಕಾಗದಗಳ ಮೇಲೆ ಸಹಿ ಮಾಡಿ, ಒಂದನ್ನು ನಮಗೆ ಕೊಟ್ಟರು.

ಇನ್ನು ಸವಿತೆಯ ತಂದೆ-ತಾಯಿಯರನ್ನು ಸಂತೈಸಬೇಕಾಗಿತ್ತು. ರವಿಯ ತಾಯಿ ಇರಲಿಲ್ಲ. ತಂದೆ ಯುನಿವ್ಹರ್ಸಿಟಿಯ ಪತ್ರಕ್ಕುತ್ತರವಾಗಿ ಬಂದಿರಲಿಲ್ಲವಾದ್ದರಿಂದ ಅವರ ಚಿಂತೆ ಸದ್ಯಕ್ಕಿರಲಿಲ್ಲ.

ನಾವೆಲ್ಲರೂ ರೂಮಿಗೆ ಬಂದೆವು. ಮದುವೆಯ ಶುಭ ಸಮಾಪ್ತಿ ಆಚರಿಸುತ್ತಾ, ಅವರಿಬ್ಬರ ಬಾಯಿಗೆ ಮಿಠಾಯಿ ಹಾಕುತ್ತಿದ್ದೆವು. ಹಾಗೂ ಗಾಬರಿಗೊಂಡು ಕಿಡಿಕಿಯ ಹೊರಗೆ ಇಣುಕುತ್ತಾ, ಹೆಜ್ಜೆಯ ಸಪ್ಪಳಕ್ಕೆ ಬೆಚ್ಚಿ ಸವಿತೆಯ ತಂದೆ-ತಾಯಿ ಬಂದರೆಂದೂ ಮದುವೆಯ ಸರ್ಟಿಫಿಕೇಟ್ ಸುರಕ್ಷಿತವಾಗಿದೆಯೋ ಇಲ್ಲವೋ ಎಂದೂ ಆಗಾಗ್ಗೆ ನೋಡುತ್ತಿದ್ದೆವು…

ಸವಿತೆಯ ತಂದೆಯಲ್ಲಿಗೆ ಹೋಗಿ, ನಮ್ರತೆಯಿಂದ ನಮಸ್ಕರಿಸಿ ನಾವು ರವಿ ಮತ್ತು ಸವಿತೆಯರ ಗೆಳೆಯರೆಂದೂ ತಮ್ಮನ್ನು ರವಿಯ ಮನೆಗೆ ಕರೆದುಕೊಂಡು ಹೋಗಲು ಬಂದಿದ್ದೇವೆ ಎಂದೂ ನುಡಿದೆವು.

ನಾವು ಅವರೊಡನೆ ರವಿಯ ರೂಮಿಗೆ ಬಂದೆವು. ರವಿ ಮಾವನ ಕಾಲು ಮುಟ್ಟಿ ನಮಸ್ಕರಿಸಿದ. ಅವರು ಲಕ್ಷ್ಯಪೂರ್ವಕವಾಗಿ ನೋಡಿ ಇಷ್ಟೇ ಹೇಳಿದರು, "ಸೋ, ಯು ಆರ್ ದಿ ಜಂಟಲ್‌ಮನ್."

ಇಷ್ಟರ ನಂತರ ಏಕಾಂತದಲ್ಲಿ ಸವಿತೆಯೊಡನೆ ಮಾತನಾಡಬಯಸಿದರು. ಅವರು ಆಕೆಯೊಡನೆ ಕೇಳಿದ ಮೊದಲನೇ ಪ್ರಶ್ನೆ ನಾವು ಸಭ್ಯ ಹುಡುಗರೋ ಎಂಬುದು. ಸವಿತೆಯು [illegible]

ಅಥವಾ ಒತ್ತಾಯದಿಂದ ಮದುವೆಯಾಯಿತೋ? ಎಂಬುದು ಅವರ ಕೊನೆಯ ಪ್ರಶ್ನೆಯಾಗಿತ್ತು.

ಇವು ಒಬ್ಬ ತಂದೆಯ ಪ್ರಶ್ನೆಗಳು. ಬಹಳ ಯೋಗ್ಯವಾಗಿದ್ದವು. ನಾವಷ್ಟೇ ಅಲ್ಲ ಸವಿತೆಯೂ ತಂದೆಯಿಂದ ಇಂಥ ಆಶೆಯನ್ನಿಟ್ಟುಕೊಂಡಿರಲಿಲ್ಲ. ಅವರು ಇದನ್ನೆಲ್ಲಾ ಒಪ್ಪಿದ್ದರು ಮತ್ತು ನಮ್ಮ ಭಯದ ಅರ್ಥ ಮಾಡಿಕೊಂಡಿದ್ದರು.

ನಾವು ಒಬ್ಬ ಒಳ್ಳೆಯ ಮನುಷ್ಯನಿಗೆ ತೊಂದರೆ ಕೊಟ್ಟಿದ್ದಕ್ಕೆ ಪಶ್ಚಾತ್ತಾಪಪಟ್ಟೆವು. ಅವರೊಡನೆ ವಿಚಾರ ವಿನಿಮಯ ಮಾಡಿ ಅವರ ಅಪೇಕ್ಷೆಯಂತೆ ಹೀಗೆ ಮಾಡಬಹುದಿತ್ತು. ಆದರೆ ನಮ್ಮದೇನೂ ತಪ್ಪಿರಲಿಲ್ಲ....

"ಸೆಡಿಸ್ಟಿಕ್ ಗಾರ್ಡಿಯನ್ಸ್ ಆಫ್ ಅವರ್ ಕಲ್ಚರ್..." ನಾವು ಅವರಿಗೆ ಅವುಡುಗಚ್ಚಿ ಹೀಗೆ ಹೇಳಬಹುದಿತ್ತು: "ಸವಿತೆಯಂಥ ಹುಡುಗಿಗೂ ತನ್ನ ತಂದೆಯಲ್ಲಿ ವಿಶ್ವಾಸವಿಡಲಿಕ್ಕೆ ಅಂಜಿಕೆಯಾಗುವಷ್ಟು ಹೆದರಿಸಿ, ನಮ್ಮ ವಿಶ್ವಾಸವನ್ನು ಭಂಗಗೊಳಿಸಿದ್ದೀರಿ..."

೪

ಎಲ್ಲಿ ಏನು ತಪ್ಪಿದೆಯೊ ಗೊತ್ತಿಲ್ಲ...

ಸ್ಟೂಡೆಂಟ್ ಹಿಂದೂ ಆಗಿದ್ದರೆ, ಮುಸಲ್ಮಾನ ಪ್ರೊಫೆಸರರ ಪೇಪರಿನಲ್ಲಿ ತನಗೆ ಕಡಿಮೆ ಗುಣಗಳು ದೊರೆಯುತ್ತವೆಯೆಂದು ಅವನಿಗೆ ಗೊತ್ತಿರುತ್ತದೆ.

ಹಾಗೆಯೇ ಸ್ಟೂಡೆಂಟ್ ಮುಸಲ್ಮಾನನಾಗಿ, ಪ್ರೊಫೆಸರರು ಹಿಂದೂವಾದರೂ...

ಗುಜರಾತೀ ಪ್ರೊಫೆಸರರಿಗೆ ಪಂಜಾಬೀ ಸ್ಟೂಡೆಂಟ್ ಇಷ್ಟವಿಲ್ಲ.

ಬಂಗಾಲೀ ಪ್ರೊಫೆಸರರಿಗ...

ಪ್ರತಿಯೊಂದು ಧರ್ಮವೂ ಪ್ರತಿಯೊಂದು ಜಾತಿಯೂ ಪ್ರತಿಯೊಂದು ಭಾಷೆಯೂ ಒಂದೊಂದು ಕೋಟೆ. ಕಾಲು ಒಮ್ಮೆ ಒಂದು ಕೋಟೆಯಲ್ಲಿ ಬಿದ್ದರೆ, ಇನ್ನೊಮ್ಮೆ ಇನ್ನೊಂದು ಕೋಟೆಯಲ್ಲಿ ಬೀಳುತ್ತದೆ ಆದರೆ ಪೆಟ್ಟು ಬೀಳುವುದು ತಲೆಯ ಮೇಲೆಯೇ, ಅಂದರೆ

ಈ ವರ್ಷವೂ ತನಗೆ ಪಾಸಾಗೊಡುವುದಿಲ್ಲ ಎಂದು ತನವೀರನಿಗಷ್ಟೇ ಅಲ್ಲ, ಎಲ್ಲರಿಗೂ ಗೊತ್ತು. ಆದರೆ ಏನೂ ಮಾಡುವಂತಿರಲಿಲ್ಲ

ಮಿಸ್ಟರ್ ಜೋಸೆಫರು ಅವನ ಪ್ರೊಫೆಸರರು. ಅವರು ಕ್ಲಾಸಿನಲ್ಲಿ ಒಂದು ಪೂವರ್ ಜೋಕ್ ಮಾಡಿದ್ದರು. ಹುಡುಗರು ಅವರನ್ನು ಸಂತೋಷಗೊಳಿಸಲು ನಕ್ಕಿದ್ದರು, ತಾವೆಲ್ಲರೂ ಜೋಕನ್ನು ಅರ್ಥೈಸಿ ಕೊಂಡಿದ್ದೇವೆಂದು ತೋರಿಸಲು. ತಾನು ಎಲ್ಲರಿಗಿಂತ ಬುದ್ಧಿವಂತನೆಂದು ತಿಳಿದಿದ್ದ ತನವೀರ ನಕ್ಕಿದ್ದಿಲ್ಲ. ಇದು ಜೋಸೆಫರಿಗೆ ಅವಮಾನಕರವಾಗಿತ್ತು.

ತಾನು ಕೀಳು ತಮಾಷೆಗೆ ಬೆಲೆಯಿತ್ತರೆ ಮಿಸ್ಟರ್ ಜೋಸೆಫರಿಗೆ ಅವಮರ್ಯಾದೆ ಮಾಡಿದಾತಾಗುತ್ತದೆ ಎಂದವನ ವಿಚಾರ ಮತ್ತು ಜೋಸೆಫರು ಈ ರೀತಿ ಸೇಡು ತೀರಿಸಿಕೊಳ್ಳುವುದು ಪ್ರಪಂಚದ ಎಲ್ಲಕ್ಕಿಂತ ಕೀಳು ತಮಾಷೆ ಎಂದೂ ಅವನ ವಿಚಾರ

ಎಲ್ಲೂ ವಿಚಾರಣೆ, ಕೇಳಿಕೆ ಇರಲಿಲ್ಲ. ಅವರು ಹಾದು ಹೋಗುವಾಗ, ನಾವು ಅವರಿಗೆ ಮಿಸ್ಟರ್ ಜೊ... ಎನ್ನುತ್ತಾ 'ಕ'ವನ್ನು ಹವೆಯಲ್ಲಿ ಕೇಳಿಸದಂತೆ ಹಾರಿ ಬಿಡುತ್ತಿದ್ದೆವು......

ಆದರೆ ಜೋಸೆಫರು ತನವೀರನ ವಯಸ್ಸಿನ ಕೆಲವು ವರ್ಷಗಳನ್ನು ಹವೆಯಲ್ಲಿ ತೂರಿಬಿಟ್ಟಿದ್ದರು. ಅದರಂತೆ ಈ ವರ್ಷವನ್ನೂ....

ತನವೀರನದು ಅಸಹಾಯ ಸ್ಥಿತಿಯಾಗಿತ್ತು— ಸೇಡು ತೀರಿಸಿಕೊಳ್ಳುವ ದಾರಿಯೇ ಇರಲಿಲ್ಲ.

೫

ಶಿರೀನಳೊಡನೆ ನನ್ನ ದೋಸ್ತಿ ಒಂದು ಪತ್ರದಿಂದಾಯಿತು.

ನನ್ನ ತಾಯಿಯನ್ನು ಸಂತೋಷಪಡಿಸಲು ಒಂದು ಐಡಿಯಾ ಮಾಡಿದೆ. ಒಂದು ವೃತ್ತಪತ್ರದ ರೂಪದಲ್ಲಿ ಒಂದು ಲೆಟರ್ ಬರೆಯಲಾರಂಭಿಸಿದೆ— "ದಿ ಟಾಯಿಮ್ಸ್ ಆಫ್ ಕಪಿಲ್"

ಸುಂದರವಾಗಿ ನಾಮಕರಣ ಮಾಡಿ ದಿನಾಂಕ, ಅದು ಎಸ್ಟ್ಯಾಬ್ಲಿಶ್ ಆದ ದಿನಾಂಕ (ನನ್ನ ಜನ್ಮ ದಿನ) ಬರೆದೆ. ಆರು ಕಾಲಮ್ಮುಗಳ ವಿಭಾಗ

ನಲ್ಲಿ. ಪ್ರಥಮ ಎರಡು ಕಾಲಂಗಳಲ್ಲಿ– 'ಮೇಜರ್ ಫಾಯನಾನ್ಶಿಯಲ್ ಕ್ರೈಸಿಸ್' ಕೆಳಗೆ ಸುದ್ದಿ ಬರೆದೆ– 'ಮೈಕ್ರೋಸ್ಕೋಪಿನಿಂದ ನೋಡಲಾಗಿ ಜೇಬಲ್ಲಿ ದುಡ್ಡು ತೀರಿದೆ ಎಂದು ತಿಳಿಯಿತು' ಎಂದು.

ನನ್ನ ಸ್ಟಡೀ ಬಗ್ಗೆ ತಾಯಿಗೆ ಚಿಂತೆ ಇತ್ತು. ಅದಕ್ಕಾಗಿ ನಂತರ ಬರೆದೆ– ಲಕ್ಷ್ಯಗೊಟ್ಟು ಓದುವ ಹುಡುಗನ (ಎದುರಿನಲ್ಲಿ ನಿಂತಿರುವ ಹುಡುಗಿಯನ್ನು ಸಹ ಗಮನಿಸದೇ) ಸ್ಕೆಚ್ ಬರೆದೆ–

"ಮದರ್ ಮೇ !ಆರ್ಡರ್ ಒವ್ ಮಂಥ್ ಸ್ಟಡೀ ಫಾಜ್."

ತಾಯಿಯ ಇನ್ನಿತರ ಚಿಂತೆಗಳಿಗೂ ಇಂತಹದೆ ಹಾಸ್ಯಮಯ ಪತ್ರ ಬರೆದು ಮೇಜಿನ ಮೇಲಿಟ್ಟಿದ್ದೆ. ಅಷ್ಟರಲ್ಲಿ ಶಿರೀನ್ ಬಂದಾಬಿಟ್ಟಳು.

ನಮ್ಮ ಮನೆಯು ಕ್ಲಬ್ಬಿನಂತಾಗಿ ಸಾಯಂಕಾಲ ಹಾಸ್ಟೆಲಿನ ಹುಡುಗ ಹುಡುಗಿಯರು ಆಗಾಗ್ಗೆ ಬರುತ್ತಿದ್ದರು.

ಶಿರೀನ್ ಆಗಾಗ್ಗೆ ಬರುತ್ತಿದ್ದರೂ, ಪರಿಚಯಕ್ಕಿಂತ ಹೆಚ್ಚೇನೂ ಇರಲಿಲ್ಲ. ವೃತ್ತಪತ್ರ ಓದಿ 'ಬ್ರಿಲಿಯಂಟ್ ಜರ್ನಲಿಸ್ಟ್' ಎಂಬ ಪದವಿ ಕೊಟ್ಟಳು. ನನ್ನ ಕೈ ಹಿಡಿದು ಡ್ಯಾನ್ಸ್ ಮಾಡಲಾರಂಭಿಸಿದಳು… ರೆಕಾರ್ಡ್ ಹಚ್ಚಿದ್ದರು… "ಐ ಆ್ಯಮ್ ಸೋ ಹ್ಯಾಪೀ, ಐ ಕುಡ್ ಪ್ಲೇ…"

ಡ್ಯಾನ್ಸ್ ಮಾಡುತ್ತಾ, ಮಾಡುತ್ತಾ…

ಅಷ್ಟು ಸನಿಹದಿಂದ ಹುಡುಗಿಯರನ್ನು ನೋಡಿದ್ದು ಇದೇ ಮೊದಲ ಸಲ. ಅವಳ ತುಟಿಗಳಿಗೆ ಮುದ್ದಿಟ್ಟೆ…

ಶಿರೀನಳ ಬಾಯ್ ಫ್ರೆಂಡ್ (ಅವಳಂತೆ ಅವನೂ ಪಾರಸಿ ಆಗಿದ್ದ) ಅವಳ ಮೇಲೆ ರೇಗಿದ್ದ. ಅವರಿಬ್ಬರೂ ಮದುವೆಯಾಗಲಿದ್ದರು. ನಾನು ಶಿರೀನಳಿಗೆ ಅವನ ಜೊತೆಯಲ್ಲೇ ಮನೆಗೆ ಬರಬೇಕೆಂದೂ ಒಂಟಿಯಾಗಿ ಬರಕೂಡದೆಂದೂ ಹೇಳಿದರೂ ಅವಳು ನನ್ನ ಮಾತು ಕೇಳಲಿಲ್ಲ.

ಅವನು ಗೆಳೆಯನ ಸಿಟ್ಟಿನ ಬಗ್ಗೆ ಹೇಳಿದಾಗ ನಾನೆಂದೆ, "ನನಗೆ ಕಷ್ಟವಾಗುವುದಿಲ್ಲವೇ ?"

"ಆಗುತ್ತದೆ," ಸ್ವಾಭಾವಿಕವಾಗಿ ಉತ್ತರಿಸಿದಳು.

"ಐ ಕಾಂಟ್ ಅಂಡರ್‌ಸ್ಟ್ಯಾಂಡ್," ನಾನು ಸ್ವಲ್ಪ ಸಮಯದ ನಂತರ ಹೇಳಿದ್ದೆ.

"ಯೂ ವಾಂಟ್ ಟು ಅಂಡರ್‌ಸ್ಟ್ಯಾಂಡ್?" ಎಂದು ಅವಳು ಪ್ರಶ್ನಿಸಿದಳು.

ನಾನವಳ ದೃಢ ಮುಖದೆಡೆ ನೋಡುತ್ತಿದ್ದೆ. ಒಂದು ವಿಚಿತ್ರ ವಿಷಯ ಹೇಳಲಿದ್ದಾಳೆಂದು ಅನಿಸಿತು.

"ಐ ಫೀಲ್ ಲೈಕ್ ಹ್ಯಾಂಗಿಂಗ್ ಇನ್ ದಿ ಸಸ್ಪೆನ್‌ಶನ್ ಆಫ್ ಎ ಫಾರ್ಮ್ ಆಫ್ ಏಸ್ಟ್ರೋ ಡಸ್ಟ್…"

ಅವಳ ಮುಖದೆಡೆ ನೋಡುತ್ತಿದ್ದೆ. ನನ್ನ ಅಸ್ತಿತ್ವವೂ ಬಹುಶಃ ಭೂಮಿಯ ಗ್ರೆವಿಟಿಯಿಂದ ಹೊರಹೋಗಿತ್ತೆಂದು ಅನಿಸಿತು…

"ಕಮ್ ಬ್ಯಾಕ್ ಟು ದ ಅರ್ಥ್" ನನ್ನ ಪ್ರಶ್ನೆಂದೆ.

ಶಿರೀನ್, "ಭೂಮಿಯ ಗ್ರೆವಿಟಿಯ ಕಡೆಗೆ ಏಕೆ? ಚಂದ್ರನ ಗ್ರೆವಿಟಿಯ ಕಡೆಗೆ ಏಕಲ್ಲ?" ಅಂದಳು. ಅವಳಿಗೆ ಭೂಮಿಯ ಗ್ರೆವಿಟಿಯ ಭಯ. ಏಕೆಂದರೆ ಭೂಮಿಯಲ್ಲಿ ಅವಳು ಪಾರಸಿಯಾಗಿ, ನಾನು ಪಾರಸೀ ಆಗಿರದ ಸತ್ಯ ಎದುರು ನಿಲ್ಲುತ್ತಿತ್ತು.

ನನ್ನದೊಂದು ಭಾಗ ಮೇಲೆದ್ದು ಚಂದ್ರನ ಗ್ರೆವಿಟಿಯಲ್ಲಿ ಸೇರುತ್ತದೆ ಎಂದೂ ಅನಿಸಿತು… ಬಹುಶಃ ಇದೇ ಕ್ಷಣದಲ್ಲಿ ನನ್ನ 'ನಾನು' ಎಂಬುದೊಂದು ಇದ್ದಿಲ್ಲ. ಎರಡಾಗಿದ್ದೆ. ಒಂದು ನನ್ನಿಂದ ಎಲ್ಲಿಯೋ ಶಿರೀನಳೊಡನೆ… ಮುದ್ದಿಟ್ಟು… ಡ್ಯಾನ್ಸ್ ಮಾಡುತ್ತಾ…… ಇನ್ನೊಂದು ನನ್ನ ಹತ್ತಿರ ನಿಂತು ಕೇವಲ ಆ ಎರಡನೆಯವನನ್ನು ನೋಡುತ್ತಲಿದ್ದೆ.

ಇಂಥ ಸ್ಥಿತಿಯಲ್ಲಿ ಜನರು ಪ್ರಸಂಗ ಬಂದಾಗ ಇನ್ನೊಬ್ಬರ ಪಾತ್ರವನ್ನು ಅಭಿನಯಿಸುತ್ತಾರೆ– ಇನ್ನೊಬ್ಬರ ದೃಷ್ಟಿಯಲ್ಲಿ ನಾನು ಹೇಗೆ ಕಾಣಿಸುತ್ತೇನೆಂಬುದನ್ನು ನೋಡಲಿಕ್ಕೆ. ಅಂದರೆ ಅವನು ಏಕಕಾಲಕ್ಕೆ 'ಆಬ್ಜೆಕ್ಟ್' ಆಗುತ್ತಾನೆ; 'ಸಬ್ಜೆಕ್ಟ್' ಆಗುತ್ತಾನೆ.

೬

ಒಂದು ದುರ್ಭರ ಪ್ರಸಂಗ ನಮ್ಮೆಣಿಕೆಗಿಂತ ಮೊದಲೇ ಎದುರು ಬಂದು ನಿಂತಿತು. ಪಿಟರ್

ಜೋಸೆಫ್ ನೇರವಾಗಿ ಹೇಳಿದ್ದರು, "ಯೂ ವಿಲ್ ಸಿ ಇಫ್ ಯೂ ಎವರ್ ಪಾಸ್..."

ತನವೀರವ ಮೌನದ ಕಟ್ಟೆ ಒಡೆದು ನಗಲಾರಂಭಿಸಿದ, "ಸರ್! ಇದೀಗ ನಿಮ್ಮ ಒಳ್ಳೆ ಜೋಕು."

ಮಿಸ್ಟರ್ ಜೋಸೆಫ್ ಇನ್ನೊಬ್ಬ ಆರ್ಕಿಟೆಕ್ಚರ್ ವಿದ್ಯಾರ್ಥಿ ಸ್ವಲ್ಪ ಹುಚ್ಚುತನದಿಂದಿರುವ ಹೀರೋಗೆ ಕಲಿಸಿ ಕೊಟ್ಟಿದ್ದರಂತೆ, ಅವನು, ಅವರು ಕಲಿಸಿದಂತೆ ಡೀನರ ಎದುರಿಗೆ ಹೇಳಿದರೆ ತನವೀರನ ಮೇಲೆ 'ಹೋಮೊ' ಆಗಿರುವನೆಂದೂ ಅಪರಾಧ ಹೊರಿಸಿ, ಅವನನ್ನೂ ಕಾಲೇಜಿನಿಂದ ಹೊರಗೆ ಹಾಕಬಹುದಾಗಿತ್ತು ಎಂಬುದೂ ತಿಳಿಯಿತು. ಆದರೆ ಹೀರೊ ಈ ಸುಳ್ಳಿನಿಂದ ಗಾಬರಿ ಬಿದ್ದು ತನವೀರನಿಗೆ ಹೇಳಿಬಿಟ್ಟ. "ದಿಸ್ ಈಜ್ ವೆರಿ ಡಿಸ್‌ಗಸ್ಟಿಂಗ್; ಐ ಕ್ಯಾನ್ ಸಬ್‌ಮಿಟ್ ಟು ಲೈಫ್, ನಾಟ್ ಟು ಏನಿವನ್ ಎಲ್ಸ್."

ತನವೀರ ಕಾಲೇಜನ್ನಷ್ಟೇ ಅಲ್ಲ. ದೇಶವನ್ನೂ ಬಿಟ್ಟ. ಈ ಸ್ಥಿತಿಯಲ್ಲಿ ಅವನಿಗೆ ಸ್ಕಾಲರ್‌ಶಿಪ್ಪು ಸಿಗುವಂತಿರಲಿಲ್ಲ. ಹಾಗೂ ಹೀಗೂ ನಾನೂರ ಎಪ್ಪತ್ತು ಕೂಡಿಸಿ ಬಸರಾಕ್ಕೆ ಹೋದ; ಏನು ಮಾಡುತ್ತಾನೋ ?

"ಇಟ್ ಈಜ್ ವೆರಿ ಡಿಸ್‌ಗಸ್ಟಿಂಗ್" ಅವನಿಲ್ಲದಿದ್ದರೂ ಈ ಶಬ್ದಗಳು ನಾನಾ ರೂಪದಲ್ಲಿ ಕಾಣುತ್ತಿದ್ದವು...

ಒಂದು ಕೋಪವಿತ್ತು, ನಿಂತ ನೀರಿನಂತೆ ಅದು ಹೊರಬರಲು ಎಲ್ಲಿಯೂ ದಾರಿಯಿರಲಿಲ್ಲ. ಆದ್ದರಿಂದ ಅಲ್ಲಿ ನಿಂತಿತ್ತೊ, ಅಲ್ಲಿಯ ಗೋಡೆಗಳನ್ನು ನೆಕ್ಕುತ್ತಿತ್ತು. ನಾವೆಲ್ಲರೂ ನಮ್ಮನ್ನು ನಾವೇ ನೆಕ್ಕುತ್ತಿದ್ದೆವು...

ಶಿರೀನಳಿಗೆ ಏನು ಹೊಳೆಯಿತೋ ಏನೋ, ಎಪ್ಪತ್ತು ಮೈಲು ದೂರದ ಕೆರೆ ನೋಡಲಿಕ್ಕೆ ನಡೆಯುತ್ತ ಹೊರಟಳು.

ಹಿಂತಿರುಗಿದಾಗ ಅರ್ಧ ರಾತ್ರಿಯಾಗಿತ್ತು. "ಥ್ಯಾಂಕ್ ಗಾಡ್, ಐ ಆ್ಯಮ್ ಅಲೈವ್" ಎನ್ನುತ್ತಾ ಯಾರೂ ಸಿಟ್ಟಿಗೇಳದಂತೆ ಮಾಡಿದಳು. ಅವಳ ಸ್ಥಿತಿ ನನಗೆ ತುಂಬಾ ಸಿಟ್ಟು ತರಿಸಿತು. ಆಕೆ ಆಯಾಸದಿಂದ ನಡುಗುತ್ತ ಮಲಗಿಬಿಟ್ಟಳು.

ಅವಳು ಬರುವಾಗ ಟ್ರಕ್ಕಿನಲ್ಲಿ ಬಂದಳು. ಆ ಮೇಲೆ ಕಾರಿನಲ್ಲಿ... ಅಂತೂ ಭಯಂಕರ...

"ಇದೇಕೆ ಹೀಗೆ ಮಾಡಿಬಿಟ್ಟೆ?" ನಾನು ವಿಚಾರಿಸುವುದರಲ್ಲಿದ್ದೆ.

ಅಷ್ಟರಲ್ಲಿ ಅವಳು ಅಂದಳು, "ಒಮ್ಮೆ ನೀನು ಹೇಳಿದ್ದೆ: 'ಕಮ್ ಬ್ಯಾಕ್ ಟು ದ ಅರ್ಥ್...' ಹಂಗರ್ ಮತ್ತು ಹಾರ್ಡ್‌ಶಿಪ್ ನೋಡಬಯಸುತ್ತಿದ್ದೆ..."

ಎಷ್ಟು ಸುಲಭ ಅರ್ಥ ಹಚ್ಚಿದ್ದಳು!

ಅವಳು ಹೊರಟಳು: "ಐ ಹೋಪ್. ಯೂ ವಿಲ್ ಆಲ್ವೇಜ್ ಬೀ ಮೈ ಫ್ರೆಂಡ್. ಫೀಲ್ ವೆರಿ ಲೋನ್ಲೀ..." ಎಂದಳು.

ನಾನು ನಕ್ಕು ಅವಳ ಮಾತು ಕಡೆಗಣಿಸುತ್ತ ಹೇಳಿದ್ದೆ: "ಒಳ್ಳೇದು. ಸ್ವಲ್ಪ ಗೆಳೆತನವನ್ನು ನನ್ನ ಬಳಿ ಜಮಾ ಮಾಡುತ್ತಾ ಹೋಗು; ಅಗತ್ಯ ಬಿದ್ದಾಗ ತೆಗೆದುಕೋ..."

ನನಗೆ ಹುಡುಗಿಯರೆಂದರೆ ಇಷ್ಟ. ನನಗೆ ಎಲ್ಲಾ ಹುಡುಗಿಯರೂ ಚಲೋ ಎನಿಸುತ್ತಿದ್ದರು. ನಾನು ಅವರ ಹತ್ತಿರ ಹೋದರೂ ಸ್ವಲ್ಪ ದೂರದಲ್ಲಿಯೇ ನಿಲ್ಲುತ್ತಿದ್ದೆ... ಮುಂದೆ ಏನಾದರೂ ಅಪಾಯ ಇದೆಯೋ ಏನೋ ಎನ್ನುವ ಹಾಗೆ... ಆದರೆ ಚಲೋ ಎನಿಸುವುದಕ್ಕಿಂತ ಹೆಚ್ಚಿನ ವಿಷಯ ನನ್ನ ಸ್ವಭಾವದಲ್ಲಿ ಪ್ರವೇಶಿಸುತ್ತಿರಲಿಲ್ಲ. ನನ್ನಲ್ಲಿ ವಿಚಿತ್ರವಾದ ಒಂಟಿತನದ ಕೊರಗಿದೆ. ವಿಚಿತ್ರ ಅದನ್ನು ಮುರಿಯಬಾರದು, ನನ್ನ ಮನಸ್ಸಿನಿಂದ ಹೋಗಗೊಡಬಾರದು ಎಂಬ ಅರ್ಥದಲ್ಲಿ.

ನಾವಿಬ್ಬರೂ ಮಾತನಾಡುತ್ತಾ, "ನಿಜವಾಗಿಯೂ ಬಾಲ್ಯದ ಅಹಂ ದೊಡ್ಡದಿರುತ್ತದೆ. ಆಗ ಯಾರಾದರೂ ಇನ್‌ಸೆಕ್ಯೂರಿಟಿಯನ್ನು ಅನುಭವಿಸಿದರೆ, ದೊಡ್ಡವರಾದ ಮೇಲೂ ಅದು ಇರುತ್ತದೆ; ನಾನು ಚಿಕ್ಕವನಿದ್ದೆ. ಆಗ ನನ್ನ ತಂದೆ ಮತ್ತು ತಾಯಿ ಬೇರೆ ಬೇರೆ ಇರತೊಡಗಿದರು. ಅವರು ಜಗಳವಾಡುತ್ತಿರಲಿಲ್ಲ."

ಶಿರೀನ್ ಅಂದಳು, "ದೆನ್ ವಾಟ್ ಈಜ್ ರಾಂಗ್ ವಿಥ್ ಯೂ? ಈ ಜಾಗದಲ್ಲಿರಲಿಕ್ಕೆ ನಾನೆಷ್ಟು ಸಲ ದೇವರಲ್ಲಿ ಪ್ರಾರ್ಥಿಸುತ್ತಿದ್ದೆ! ನನ್ನ ತಾಯಿ

ಚಡಪಡಿಸುತ್ತಾ, ಅಳುತ್ತಾ ಇರುವಾಗ ಎದ್ದು ಯೋಚಿಸುತ್ತಿದ್ದೆ– ಒಬ್ಬರಿಗೊಬ್ಬರು ಯಾವಾಗ ಸೇರುವುದಿಲ್ಲವೋ ಅವರು ಜೊತೆ ಜೊತೆಯಲ್ಲಿ ಏಕೆ ಇರುತ್ತಾರೆ? ಅಂತ ನೀನು ತಾಯಿಯ ಎದುರಿಗೆ ತಂದೆ ಬೇರೊಂದು ಹೆಣ್ಣನ್ನು ತಂದುದನ್ನು ನೋಡಿದ್ದೀಯಾ? ಯೂ ಡೋಂಟ್ ನೋ ಹೌ ಡಿಸ್‌ಗಸ್ಟಿಂಗ್ ಇಟ್ ಈಜ್..."

ಇಲ್ಲ, ಅವಳು ಅಳುತ್ತಿರಲಿಲ್ಲ.

ಅವಳ ಭುಜದ ಮೇಲೆ ಕೈಯಿಟ್ಟೆ. ಅವಳು ಕತ್ತನ್ನು ಬಾಗಿಸಿ ನನ್ನ ಮುಂಗೈಗೆ ತಲೆ ಇಟ್ಟಳು.

೭

ಫಿಶ್ ಪಾಂಡ್ ಗೇಮ್ ನಡೆಯುತ್ತಿತ್ತು.

ಈ ಆಟಕ್ಕೆ 'ಫಿಶ್ ಪಾಂಡ್' ಎಂದು ಯಾರು ಹೆಸರಿಟ್ಟಿದ್ದಾರೋ; ಪ್ರತಿಯೊಬ್ಬನೂ ಒಂದೊಂದು ತಮಾಷೆಯ 'ಕೊಂಡಿಯಲ್ಲಿ ಸಿಕ್ಕಿ, ಮೀನಿನಂತೆ ಒದ್ದಾಡುತ್ತಿದ್ದ.

ರಿಕ್ಕೀ ನನ್ನ ಎಡ ಬದಿಗೆ ಕುಳಿತಿದ್ದಳು. ಅವಳ ಪರಿಚಯ ಬಹಳಷ್ಟಿರಲಿಲ್ಲ. ಅವಳ ಬಗೆಗಿನ ತಮಾಷೆ ಸುಂದರವಾಗಿತ್ತು. ರಿಕ್ಕಿಯ ತಂದೆ–ತಾಯಿ ಕಠೋರ ಪ್ರವೃತ್ತಿಯವರು, ತಂದೆಯ ಮಾತಿನ ಧಾಟಿ ಆಪ್ಪಣೆ ಕೊಡುವಂತಿರುತ್ತದೆ ಎಂದು ಕೇಳಿದ್ದೆ.

ಆದ್ದರಿಂದ ರಿಕ್ಕೀಗೆ ಸಿಕ್ಕ ಹೊಸ ಪದವಿ 'ಮಿಸ್ ಕ್ರೆಮ್‌ಲಿನ್.' ಅವಳಿಗೆ ಗಾಬರಿಯಾಗಿತ್ತು... ತನ್ನ ತಂದೆ–ತಾಯಿಯರ ಕಿವಿಗೆ ಬಿದ್ದರೆ ಎಂದು...

ರಿಕ್ಕೀ ತನ್ನ ಮೃದುವಾದ ಬೆರಳುಗಳಿಂದ ನನ್ನ ಕೈ ಹಿಡಿದಾಗ; ಅದನ್ನು ಹಿಸುಕುವ ನನ್ನ ಬಯಕೆಯನ್ನು ಹತ್ತಿಕ್ಕಿದೆ. ನನ್ನ ಕೈ ಮೀನು ಸಿಕ್ಕಿಸುವ ಕೊಂಡಿಯಾಗಬಾರದು; ಅದು ಒಂದು ಕೆರೆಯ ಭಾಗವಾಗಬೇಕು. ಅಲ್ಲಿ ಮೀನು ಸ್ವತಂತ್ರವಾಗಿ ಇರಬಹುದು, ಬರಬಹುದು ಹೋಗಬಹುದು...

ಒಂದು ಸಂಜೆ ಮಿಸ್ ಕ್ರೆಮ್‌ಲಿನ್ ಬಂದಿದ್ದಳು, ಅವಳ ಗೆಳತಿಯರೊಡನೆ... ಅವಳೆಂದಳು– "ಸೋಶಲಾಯಿಜೇಶನ್ ಸಲುವಾಗಿ ಬಂದಿದ್ದೇನೆ."

ಅವಳಿಷ್ಟದಂತೆ 'ಮಂಕೀಗೀತ'ದ ರೆಕಾರ್ಡ್ ಹಾಕಿದಾಗ ಎಲ್ಲರೊಂದಾಗಿ ಡ್ಯಾನ್ಸ್ ಮಾಡಲು ಶುರು ಮಾಡಿದೆವು.

ಡ್ಯಾನ್ಸ್ ಮಾಡುತ್ತಾ, "ರಿಲೇಶನ್‌ಶಿಪ್ ಎರಡು ತರದ್ದು ಇರುತ್ತದೆಂಬುದು ನಿನಗೆ ಗೊತ್ತೇ?" ಎನ್ನುತ್ತಾ ಪುನಃ ವಿಸ್ತರಿಸಿ ಹೇಳಿದ್ದಳು, "ಮೊರ್ಯಾಲಿಟೀ ಎರಡು ತರಹದ ರಿಲೇಶನ್‌ಶಿಪ್‌ನಿಂದ ಉಂಟಾಗುತ್ತದೆ. ಒಂದು ರಿಲೇಶನ್ ಆಥಾರಿಟಿಯಿಂದ ಆಗುತ್ತದೆ. ತಂದೆ–ತಾಯಿಯಿಂದ, ಸುಪೀರಿಯರ್, ಎಕ್ಸ್‌ಟರ್ನಲ್ ಅಬ್ಸಲ್ಯೂಟ್ ಮತ್ತು ಬಿಯಾಂಡ್ ಕಾಂಪ್ರಿಹೆನ್ಶನ್..." ಅವಳ ದನಿ ನನ್ನ ಬಳಿಗೆ ಸಾರಿ ಬಂದಿತ್ತು.

"ಇನ್ನೊಂದು ರಿಲೇಶನ್‌ಶಿಪ್ ಇರುವುದು ಸಮಾನಸ್ಕಂದರಲ್ಲಿ. ಇದರಲ್ಲಿ ಮಿಸ್ಟಿಕ್ ಸುಪೀರಿಯಾರಿಟಿ ಇರುವುದಿಲ್ಲ. ಇಟ್ ಈಜ್ ಕೇಪೆಬಲ್ ಆಫ್ ಮಾಡಿಫಿಕೇಶನ್ ಎಕಾರ್ಡಿಂಗ್ ಟು ದಿ ನೀಡ್ಸ್ ಆಫ್ ದಿ ಪಾರ್ಟಿಸಿಪಂಟ್ಸ್..."

ಅವಳೆನ್ನುತ್ತಿದ್ದಳು. "ನನ್ನ ತಂದೆ ತಾಯಿಗೆ ತಿಳಿಯುವುದಿಲ್ಲ. ನನ್ನ ಸಮವಯಸ್ಕರ ಜೊತೆಗೆ ಯಾರೊಡನೆಯೂ ಅವರು ಭೆಟ್ಟಿಯಾಗಗೊಡುವುದಿಲ್ಲ. ಈ ಕೊರತೆಯನ್ನು ತಂಪಾದ ಬರ್ಫಿನಂಥ ವಸ್ತುಗಳಿಂದ, ಅಂದರೆ ರಾ ಸಿಲ್ಕಿನ ಸೂಟಿನಿಂದ......ಫಾರಿನ್ ಕೋಟಿನಿಂದ ತುಂಬ ಬಯಸುತ್ತಾರೆ. ನಾನಿವತ್ತು ಕಾಲೇಜಿನಲ್ಲಿ ಎಕ್ಸ್‌ಟ್ರಾ ಕ್ಲಾಸ್ ನಡೆಯುವುದೆಂದು ಹೇಳಿಬಂದಿದ್ದೇನೆ...ಅಗತ್ಯಬಿದ್ದರೆ ನನಗಾಗಿ ಸುಳ್ಳು ಹೇಳುವಿಯಾ?"

೮

"ಮಿಸ್ ಕ್ರೆಮ್‌ಲಿನ್ ಈಜ್ ಅಂಡರ್ ಹೌಸ್ ಅರೆಸ್ಟ್" ಎಂಬ ಸುದ್ದಿಯನ್ನು ಅವಳ ಗೆಳತಿಯಿಂದ ಮೂರು ದಿನಗಳ ನಂತರ ಕೇಳಿದ್ದೆ.

ಮಿಸ್ ಕ್ರೆಮ್‌ಲಿನಳ ಬಗ್ಗೆ ಯೋಚಿಸುತ್ತಿದ್ದೆ. ಆಗಾಗ್ಗೆ ಎನಿಸುತ್ತಿತ್ತು, ತನ್ನನ್ನು ಜ್ಯೂಲಿಯಟ್ಟಳಂತೆಯೂ ಮತ್ತು

ಸಂತೆಯೂ ಭಾವಿಸಿದ್ದಾಳೆಂದು

ನಾನು ಮತ್ತು ರಿಕ್ಕೀ ಎರಡು ಅಪರಿಚಿತ ಮನೆತನದ ಮಕ್ಕಳು. ಅಲ್ಲಿ ಗೆಳೆತನ ಮತ್ತು ವೈರದ ಪ್ರಶ್ನೆಯೇ ಇರಲಿಲ್ಲ. ಆದರೆ ರಿಕ್ಕೀ ಶಾಂತಿಭವನಕ್ಕೆ (ತಮ್ಮ ಮಹಲ್) ಬರುವ ವಿಷಯ ಅವಳ ತಂದೆ ತಾಯಿಗಳಿಗೆ ತಿಳಿದಿತ್ತು. ಇತರರೂ ಅಲ್ಲಿಗೆ ಬರುತ್ತಿದ್ದರೂ ಅವಳ ತಂದೆ ತಾಯಿಗಳಿಗೆ ನನ್ನ ಹೆಸರೇ ವಿಶೇಷವಾಗಿ ಗಮನಕ್ಕೆ ಬರುತ್ತಿದ್ದಿತು.

ಆದರೆ ನಾನು ರೋಮಿಯೋ ಆಗಿದ್ದಿಲ್ಲ. ರಿಕ್ಕೀಯ ಪರವಾಗಿ ಆದ ಈ ಆಯ್ಕೆ ಸ್ವಾಭಾವಿಕ ಗೆಳೆತನದ ರೂಪದಲ್ಲಿ ಅವಳ ತಂದೆ ತಾಯಿಗಳಿಗೆ ಸ್ವಾಭಾವಿಕ ವೈರದ ರೂಪದ ಆಗಿತ್ತು. ಅವರಿಂದ ನನಗೆ ಬೆದರಿಕೆ ಬಂದಿತು, ಈ ಜನ್ಮದಲ್ಲಿ ರಿಕ್ಕೀಯನ್ನು ಭೆಟ್ಟಿಯಾಗಬಾರದು ಎಂದು.

ರಿಕ್ಕೀಗೆ ಈ ಬೆದರಿಕೆ ಇದ್ದರೂ ಶಾಂತಿಭವನಕ್ಕೆ ಬಂದಿದ್ದಳು. ಅವಳ ಬಗ್ಗೆ ನಾನೆಂದೆ, "ನೀನು ಸುಮ್ಮನೆ ವಿಪತ್ತನ್ನು ಮೈಮೇಲೆ ಏಕೆ ಹಾಕಿಕೊಳ್ಳುತ್ತಿಯಾ?"

"ಏಕೆಂದರೆ ಅವರು ಸುಮ್ಮಸುಮ್ಮನೆ ನನ್ನ ಮೇಲೆ ಒತ್ತಾಯಮಾಡುತ್ತಿದ್ದಾರೆ."

"ಇದರ ಪರಿಣಾಮವೇನಾಗುವುದು?"

"ಪುನಃ ಇಂಟರೊಗೇಶನ್, ಪುನಃ ಹೌಸ್ ಅರೆಸ್ಟ್, ಪುನಃ ಒತ್ತಾಯ..."

"ಆದರೆ ಎಷ್ಟು ಸಲ? ಎಲ್ಲಿಯತನಕ?"

"ಎಲ್ಲಿಯವರೆಗೆ ಅನೇಕ ಠಾಣೆಗಳಲ್ಲಿ ನಡೆಯುತ್ತದೆಯೊ ಎಲ್ಲಿಯವರೆಗೆ ಠಾಣೆಯವರು ಅಪರಾಧಿಯನ್ನು ಮೂರನೆ ಅಂತಸ್ತಿನಿಂದ ಕೆಳಗೆ ನೂಕಿ ಅವನು ತಾನೆ ಜಿಗಿದು ಆತ್ಮಹತ್ಯೆಯನ್ನು ಮಾಡಿಕೊಂಡನೆಂದು ಹೇಳುತ್ತಾರೆಯೋ..."

ನಾನು ಕಂಪಿಸಿದೆ. ನೂಕುವುದು ಮತ್ತು ಹತ್ಯೆ ಇವೆರಡರ ನಡುವಿನ ಅಂತರ ಎಲ್ಲಿ ಇರುವುದಿಲ್ಲ?

ಒಂದು ದಿನ ಅಕಸ್ಮಾತ್ ಜನರು ಯಾರೋ ಓಬ್ಬನೊಡನೆ ನನ್ನ ಮದುವೆಯನ್ನು ಮಾಡಿಬಿಡಬಹುದು. ಆದರೆ ಇದೂ ಮೂರನೆ ಅಂತಸ್ತಿನಿಂದ ತಳ್ಳಿದಂತಲ್ಲವೇನು ? ಅಲ್ಲದೆ ಇನ್ನೂ ಒಂದು ಆಪತ್ತು ಬರಬಹುದು, ತನವೀರ ನಂತಹದು. ದೇಶಾಂತರಕ್ಕೆ ಹೋಗುವುದು... ಜಿದ್ದು ಬಿಡದ ಮಿ. ಜೋಸೆಫರಿಂದ ತನವೀರ ದೇಶ ಬಿಡಬೇಕಾಯಿತು. ನನ್ನ ತಂದೆ ತಾಯಿಗಳು ಸಹ ತಮ್ಮ ಜಿದ್ದು ಬಿಡಲಿಕ್ಕಿಲ್ಲ ಎನಿಸುತ್ತದೆ.

ಅಷ್ಟರಲ್ಲಿ ರೆಕಾರ್ಡ್ ಹಚ್ಚಿದ್ದರಿಂದ ನಾನು-ರಿಕ್ಕೀ ಹಾಲಿಗೆ ಹೋಗಿ ಡ್ಯಾನ್ಸ್ ಮಾಡಲಾರಂಭಿಸಿದೆವು. ರಿಕ್ಕೀ ಎಂದಳು, "ನಾನು ದೇಶ ಬಿಟ್ಟಾಗ ನೀನೂ ನನ್ನ ಕೂಡ ಬರುವೆಯಾ ?"

ಉತ್ತರ ರೂಪವಾಗಿ ನಾನವಳ ತುಟಿಗಳಿಗೆ ಮುದ್ದಿಟ್ಟೆ.

ಮಿಸ್ಟರ್ ಜೋಸೆಫ್ ಅವರ ಜಿದ್ದು ಗಾಳಿಯಲ್ಲಿ ಎಲ್ಲ ಕಡೆಗೂ ಬೀಸುತ್ತಿತ್ತು. ಒಮ್ಮೆ ತಂದೆ ತಾಯಿಗಳ ರೂಪದಲ್ಲಿ, ಒಮ್ಮೆ ಪೂರ್ಣ ರಾಜಕೀಯ ರೂಪದಲ್ಲಿ...

*

ಎಷ್ಟೋ ಹೊತ್ತಿನವರೆಗೆ ಹೀಗೆ ಅನಿಸುತ್ತಿತ್ತು, ನಾವಿಬ್ಬರೂ ಒಂದು ಅಪರಿಚಿತ ಜಾಗದ ಮೇಲೆ ನಿಂತಿದ್ದೆವು. ಒಂದೆಡೆ ಉಸುಕಿನ ರಾಶಿ... ಒಂದೆಡೆ ಪರ್ವತ...ಬರೆ ಅಡವಿ ಮತ್ತು ಒಂದು ಕಡೆಯಲ್ಲಿ ಕೇವಲ ನಗರವಿತ್ತು. ಅದರಲ್ಲಿ ನಮ್ಮ ತಲೆಮರೆಸಿಕೊಳ್ಳುವಷ್ಟು ಸಹ ಜಾಗ ಇದ್ದಿಲ್ಲ.

ರಿಕ್ಕೀ ನಡೆದು ನಡೆದು ದಣಿದಿದ್ದಳು. ನಾನವಳ ತುಟಿಗಳಿಗೆ ಮುದ್ದಿಡುತ್ತಿದ್ದೆ.

ರಿಕ್ಕೀಗೆ ಬಹಳ ಹಸಿವಾಗಿತ್ತು. ಮತ್ತೂ ನಾನವಳ ತುಟಿಗಳಿಗೆ ಮುತ್ತಿಡುತ್ತಿದ್ದೆ. ರಿಕ್ಕೀ ಚಳಿಯಿಂದ, ಜ್ವರದಿಂದ ಬಳಲುತ್ತಿದ್ದಳು. ಮತ್ತೂ ನಾನು ಅವಳ ತುಟಿಗಳಿಗೆ ಮುತ್ತಿಡುತ್ತಿದ್ದೆ...

ಓ ಮಾಯ್ ಗಾಡ್! ನನ್ನ ಹತ್ತಿರ, ನನ್ನ ಹೊರತಾಗಿ ರಿಕ್ಕೀಗೆ ಕೊಡುವಂತಹದೇನಿತ್ತು ?

"ಈಗಲೇ ಇಲ್ಲ. ನಿನ್ನ ಡಿಗ್ರಿಯಾದ ಮೇಲೆ," ರಿಕ್ಕೀ ಸ್ವಲ್ಪ ತಿಳಿದುಕೊಂಡಳು.

ಅವಳ ವಿಶ್ವಾಸ ಸ್ವಲ್ಪ ಹೆಚ್ಚವೆನಿಸುತ್ತಿತ್ತು. "ಲೆಟ್ ಅಸ್ ಸೋ ದಿ ಅರ್ಥ್ ವಿಥ್ ಕ್ರೇಜೀ ಡ್ರೀಮ್ಸ್..." ಎಂಬ ಹಾಡು ಹಾಲಿನಿಂದ ಕೇಳಿಸುತ್ತಿತ್ತು.

೯

ಶಿರೀನಳಷ್ಟೇ ಅಲ್ಲ ಅವಳ ಗೆಳೆತನ ಬಹಳ ಬಿಗುವಿನದು. ಅವಳ ಮದುವೆಯ ನಿಶ್ಚಯ ಫಾರಸೀ ಹುಡುಗನೊಬ್ಬನ ಕೂಡ ಆಗಿ ಹೋಯಿತು– ನನ್ನನ್ನು ಭೆಟ್ಟಿಯಾಗಬಾರದೆಂದು. ಆದರೂ ಶಿರೀನ್ ನನ್ನೊಡನೆ ಅದೇ ಗೆಳೆತನದಿಂದ ಭೆಟ್ಟಿಯಾಗಲು ಬರುತ್ತಿದ್ದಳು.

ರಿಕ್ಕೀ ತನ್ನ ತಾಯ್ತಂದೆಗಳ ಜಾಲದಲ್ಲಿ ಸಿಕ್ಕು ಅಳುತ್ತಿದ್ದಳು, ಗಾಸಿಯಾಗುತ್ತಿದ್ದಳು. ಅಳುತ್ತಾ ಹೇಳುತ್ತಿದ್ದಳು, "ಮಾಯ್ ಈಡಿಯಟ್ ಫಾದರ್ ವಿಲ್ ನೆವರ್ ಅಂಡರ್–ಸ್ಟ್ಯಾಂಡ್." 'ಈಡಿಯಟ್' ಈ ಶಬ್ದ ತಂದೆ ಗೋಸ್ಕರ ಇರಲಿಲ್ಲ. ತಂದೆಯನ್ನು ಯಾವ ಸ್ಥಿತಿಯು ಯಾವ ತರಹ ಮಾಡಿದೆಯೊ ಆ ಎಲ್ಲದರ ಸಲುವಾಗಿ ಇತ್ತು. ಮತ್ತು ಈ ಶಬ್ದ ಯಾವ ದೋಷ ಮತ್ತು ತಿರಸ್ಕಾರದ ಬೇರುಗಳಿಂದ ಹುಟ್ಟಿದೆಯೋ ಆ ಬೇರುಗಳು ಕೇವಲ ಒಂದು ಸಂಬಂಧ ಅಥವಾ ಮನೆಯ ಮೇರೆಗಳವರೆಗೆ ಸೀಮಿತವಾಗಿಲ್ಲ; ಅವೆಲ್ಲವೂ ಸಾಮಾಜಿಕ ಪಡಿಯಚ್ಚಿನ ಮಣ್ಣಿನಲ್ಲಿ ಹಬ್ಬಿದೆ ಎಂದೂ ಗೊತ್ತಿತ್ತು.

ಯಾವುದೋ ತಪ್ಪು ಪಡಿಯಚ್ಚಿನಿಂದ ಹುಟ್ಟಿದ ರೋಷವಾಗಲಿ ಅಥವಾ ತಿರಸ್ಕಾರವಾಗಲಿ, ಸ್ವತಃ ಜೀವನದ ಗುರುತಾಗಿ ಸದಾ ಇದ್ದೇ ಇರುತ್ತದೆ. ಜೀವಂತ ಡಂಕಿನಂತೆ ಇದನ್ನು ವರ್ಷಗಟ್ಟಲೆ ಹೃದಯದಲ್ಲಿ ಬಚ್ಚಿಟ್ಟುಕೊಂಡು ಯಾರೂ ಸಾಬೀ–ತಾಗಿ ಉಳಿದಿಲ್ಲ. ಪ್ರಾಯಶಃ ಒಪ್ಪಂದದ ರೂಪದಲ್ಲಿ ಮನುಷ್ಯನು ಇದರ ಪೀಡೆಯಿಂದ ಬಿಡುಗಡೆಯನ್ನು ಹುಡುಕಿ ತೆಗೆಯುತ್ತಾನೆ ಅಥವಾ ಇದರ ಪೀಡೆಯಿಂದ ಬೇರೆಯಾಗಿ ಅತ್ಯಂತ ಶೂಕ ತಪ್ಪಿನ ಚಟಗಳಲ್ಲಿ ಆಶ್ರಯವನ್ನು ಹುಡುಕ ತೊಡಗುತ್ತಾನೆ.

ರಿಕ್ಕೀಯ ಗತಿಯೇನಾಗುವುದೆಂಬ ಚಿಂತೆ ನನಗಿತ್ತು. ತಿರಸ್ಕಾರವು ವಿಷವಾಗಿ ತಲೆಗೇರುತ್ತದೆ. ಮತ್ತು ವಿಷದಿಂದ ವಿಷವನ್ನು ದೂರ ಮಾಡುವ ಔಷಧವಾಗಿಯೂ ಸಿಗುತ್ತದೆ.

ರಿಕ್ಕೀಯನ್ನು ನೋಡದೇ ಕೇವಲ ವಿಚಾರ ಮಾಡುತ್ತ ಸಾಗಿದ್ದೆ...

ವಿನೋದನಿಗೂ ಚಿಂತೆಯಾಗಿತ್ತು. ಅತ್ಯಂತ ಕಷ್ಟದಿಂದ ಆತ ಏರ್ಪಡಿಸಿದ ತನ್ನ ಪೇಂಟಿಂಗುಗಳ 'ಓನ್ ಮ್ಯಾನ್ ಶೋ' ಬಗ್ಗೆ ಎಲ್ಲಿಯೂ ಯಾವ ಚರ್ಚೆಯೂ ಇರಲಿಲ್ಲ.

"ಆರೇಂಜ್ ಪಬ್ಲಿಸಿಟಿ, ಆಯ್ ಹೇಟ್ ಇಟ್," ಎಂದು ವಿನೋದ ಕಹಿ ಉಗುಳುತ್ತಿದ್ದ ಅಥವಾ ನುಂಗುತ್ತಿದ್ದ. ಇದಕ್ಕಿಂತ ಹೆಚ್ಚಿನದೇನೂ ಆತನಿಂದ ಸಾಧ್ಯವಿರಲಿಲ್ಲ.

ಅಕಸ್ಮಾತ್ ಅವನಿಗೊಂದು ಕ್ರೇಜೀ ಐಡಿಯಾ ಹೊಳೆಯಿತು. ಯಾರ ನೆರವನ್ನೂ ತೆಗೆದು–ಕೊಳ್ಳದೆ ಆರ್ಟ್ ಗ್ಯಾಲರಿಯನ್ನೊಂದನ್ನು ಬುಕ್ ಮಾಡಿದ.

ಗ್ಯಾಲರಿಯ ಹೊರಗೆ ಒಂದು ದೊಡ್ಡ ಪೋಸ್ಟರ್ ಹಚ್ಚಿಸಿದ 'ರಿಯಲೀ ರಿಯಲಿಸ್ಟಿಕ್ ಪೇಂಟಿಂಗ್ಸ್'

ವಿನೋದ ಪ್ರಕಟಿಸಿದ ವೇಳೆಗೆ ಸರಿಯಾಗಿ ಗ್ಯಾಲರಿಯ ಕೀಲಿ ತೆರೆದ. 'ಓ...ಖುದಾಯಾ... ಅಯ್ಯೋ ದೇವರೆ...

ಒಂದೆಡೆ ಬರೆಯಲಾಗಿತ್ತು. 'ಪೋಟ್ರೇಟ್ ಆಫ್ ಎ ಕ್ಯಾಟ್' ಮತ್ತು ಅದರ ಕೆಳಗೆ ಒಂದು ಬೆಕ್ಕನ್ನು ಕೊಂದು ಒಂದು ಮೊಳೆಗೆ ತೂಗು ಹಾಕಲಾಗಿತ್ತು.

ಇನ್ನೊಂದೆಡೆ ಹಾಗೆಯೇ ಇಲಿ...ಪಾರಿವಾಳ, ಕಾಗೆ...ಗುಬ್ಬಿ.

ಎಷ್ಟೋ ಕಡೆಗಳಲ್ಲಿ ಕೇವಲ ಒಂದು ಮೊಳೆ. ಕತ್ತರಿ......ಪೆನ್ಸಿಲ್ ಇಟ್ಟು ಪ್ರತಿಯೊಂದಕ್ಕೆ ಒಂದೊಂದು ಟೈಟಲ್ ಕೊಡಲಾಗಿತ್ತು...

ನಾನು ಗಾಬರಿಗೊಂಡು ತಮಾಷೆಯಾಗಿ ಕೇಳಿದೆ, "ವಾಟ್ ಎ ಬಾರ್ಟ್ ಸೆಲ್ಫ್ ಪೋಟ್ರೇಟ್? ವಿನೀ ನಕ್ಕು ನುಡಿದ "ಅದು ಕೊನೆಯ ಐಟಂ. ಅದಕ್ಕೂ ಮುಂಚೆ ಇನ್ನೊಂದು ಅಗತ್ಯವಾದ ಐಟಮ್ ಇರುತ್ತದೆ. ಪೋಟ್ರೇಟ್ ಆಫ್ ಅನ್ ಈಡಿಯಟ್ ಕ್ರಿಟಿಕ್."

ನನಗೆ ನಡುಕ ಬಂದಂತಾಯಿತು. ಅದೇ ಶಬ್ದ ರಿಕ್ಕೀಯದು, 'ಈಡಿಯಟ್ ಫಾದರ್.' ಒಂದು ವೇಳೆ ತನವೀರನಿದ್ದರೆ, ವಿನೋದನಿಗೆ 'ಪೋಟ್ರೇಟ್ ಆಫ್ ಅನ್ ಈಡಿಯಟ್

# ಅವುಗಳಿಂದ ನೀವು
# ಪಡೆಯುವಿರಿ
# ಮಧುರಾನಂದ



ಎಲ್ ವಿಟಿ
ಗ್ಲೂಕೋಸ್ ಬಿಸ್ಕತ್‌ಗಳು







ಎಲ್ ವಿಟಿ ಪ್ರಾಡಕ್ಟ್ಸ್ ಲಿ
ಹುಬ್ಬಳ್ಳಿ-580030

LVT.6.02

ಟೀಚರ್' ಚಿತ್ರಿಸಲಿಕ್ಕೆ ಜರೂರು ಹೇಳುತ್ತಿದ್ದ ನೆಂದೆನಿಸಿತು.

ಪ್ರತಿಯೊಂದು ಟೈಟಲ್ಲಿನ ಹಿಂದೆ ಇತ್ತು, 'ದಿ ಈಡಿಯಟ್ ಸಿಸ್ಟವ್.'

ಅವರಿಬ್ಬರೆಲ್ಲಿದ್ದಾರೊ, ಆದರೆ ಕೇವಲ ವಿನೋದ ಎಮುಗಿದ್ದ. ನಾನವನನ್ನು ನನ್ನ ತೋಳ ತೆಕ್ಕೆ ಯಲ್ಲಿ ಹಿಡಿದುಕೊಂಡು ಗ್ಯಾಲರಿಯ ಹೊರಗಿನ ದಾರಿಗಳ ಮೇಲೆ ಬಂದೆ.

೧೦

ರಿಕ್ಕೀಯ ಗೆಳತಿ ಬಂದಿದ್ದಳು. ರಿಕ್ಕೀ ಒಂದೇ ಸಮನೆ ಹೊಡೆತ ತಿಂದರೂ ಮಣಿದಿದ್ದಿಲ್ಲ ಎಂದು ತಿಳಿಯಿತು. ಅವಳ ತಂದೆ ಎಲ್ಲ ಅಸ್ತ್ರ ಬಿಟ್ಟು ಕೇಳಿದ್ದರು, "ನಿನಗೆ ಕಪಿಲ ಇಷ್ಟವೇನು ? ನಾನು ಮತ್ತು ಕಪಿಲ ಇಬ್ಬರಲ್ಲಿ ಯಾರು ಬೇಕೋ ಅವರನ್ನ ಆರಿಸಿಕೋ." ರಿಕ್ಕೀ ಇದಕ್ಕೆ ಮೌನ ತಾಳಿದ್ದಳು.

ಇದೆಲ್ಲವನ್ನೂ ಕೇಳಿ ನನ್ನಿಂದ ಮಾತಾಡಲಿ ಕ್ಕಾಗಲಿಲ್ಲ. ನಾನೂ ಬಹುಶಃ ರಿಕ್ಕೀಯಂತೆ ಸುಮ್ಮನಾಗಿಬಿಟ್ಟಿದ್ದೆ.

ಹೀರೂ ನನ್ನ ಹತ್ತಿರ ಕುಳಿತಿದ್ದ. ಅವನಿಷ್ಟೇ ಮಾತನಾಡಿದ, "ಇಜಂಟ್ ಹೀ ಎ ಪರ್‌ವರ್ಟ್?"

ಒಬ್ಬ ಹುಡುಗನ ಗೆಳೆತನ ಮತ್ತು ಒಬ್ಬ ತಂದೆಯ ಸಂಬಂಧ ಎರಡೂ ಹೇಗೆ ಸಮ ಆದಾವು? ಎರಡನ್ನೂ ಒಂದೇ ಸ್ತರದಲ್ಲಿಟ್ಟು ಒಂದನ್ನು ಬಿಡುವುದು, ಒಂದನ್ನು ಆಯ್ದು ಕೊಳ್ಳುವುದು. ಇದೆಂಥ ಪ್ರಶ್ನೆ? ಹೀರೂ ನಂಥ ಹುಚ್ಚು ಹುಡುಗನು ಇದಕ್ಕೆ ಪರ್–ವರ್ಶನ್ ಎನ್ನುವಾಗ ನನ್ನಲ್ಲಿ ಇಷ್ಟು ಹೇಳು ವಷ್ಟು ಸಾಮರ್ಥ್ಯವಿದ್ದಿಲ್ಲ.

ಇದೇ ಸಮಯದಲ್ಲಿ ನಮ್ಮ ಪರೀಕ್ಷೆಗಳು ನಡೆ ಯುತ್ತಿದ್ದವು. ರಿಕ್ಕೀಯ ಬಗ್ಗೆ ಪರೀಕ್ಷೆಯ ದಿನಗಳಲ್ಲಾದರೂ ಏನೂ ಯೋಚಿಸಬಾರದೆಂದು ನಿರ್ಧರಿಸಿದ್ದೆ. ಹಾಗೆ ನೋಡಿದರೆ ನನ್ನ ಜೀವನ ದೊಡನೆ ಅವಳನ್ನು ಜೋಡಿಸಿಕೊಂಡಿದ್ದಿಲ್ಲ. ನನ್ನ ಷ್ಟಕ್ಕೆ ನಾನು ಸುಮ್ಮಸುಮ್ಮನೆ ರೋಮಿಯೋ ಆಗುತ್ತಿದ್ದೇನೆ ಅನ್ನಿಸುತ್ತಿತ್ತು. ಮತ್ತು ರಿಕ್ಕೀ ಯನ್ನು ಅವಳ ತಂದೆ ಪೀಡಿಸುವುದನ್ನು ಸಹಿಸು ವುದು ಅಷ್ಟೊಂದು ದೊಡ್ಡ ಮಾತೆನಿಸಿದ್ದಿಲ್ಲ. ಆದರೆ ಅವಳ ತಂದೆ ಅವಳ ಸಾದಾ ಮನಸ್ಸನ್ನು ತಿರುಗಿಸಲು ಮಾಡಿದ ಪ್ರಯತ್ನದ ಬಗ್ಗೆ ನನಗೆ ರೋಷವುಂಟಾಗಿ ಆ ಚಿಂತೆ ನನ್ನ ಮನಕ್ಕೆ ಹತ್ತಿತ್ತು.

ಅಂದು ಮಧ್ಯಾಹ್ನ ನಮ್ಮ ಟೆಕ್ನಿಕಲ್ ಡ್ರಾಯಿಂಗ್ ಪೇಪರ್ ಇತ್ತು. ನಾನು ಆ ಪೇಪ ರನ್ನು ಹೇಗೆ ಮಾಡಿದ್ದೇನೆಂಬುದೂ ಗೊತ್ತಿಲ್ಲ.

ನನ್ನ ಪರಿಚಿತ ಹುಡುಗರಿಬ್ಬರ ಒತ್ತಾಯ ಲೋಭನೆಗೆ ನಾನು ಎಗ್ಸಾಮಿನೇಶನ್ ಹಾಲ್‌ನಲ್ಲಿ ಕೀಲಿ ಹಾಕಿಟ್ಟ ರೂಮಿನಿಂದ ಪೇಪರು ತಂದೆ. ಪೈಪ್ ಹತ್ತಿ ಬೆಳಕಿಂಡಿಯಿಂದ ಜಿಗಿದು, ಬೆಂಕಿಕಡ್ಡಿ ಕೊರೆದು ರೋಲ್ ನಂಬರ್ ಹುಡುಕಿ ಶರ್ಟಿ ನೊಳಗಿಟ್ಟು ಹೊರಬಿದ್ದೆ...

ಅವರಿಬ್ಬರೂ ಪೇಪರು ತೆಗೆದುಕೊಂಡು ಹೋದರು. ಆದರೆ ನಾನು ಪೇಪರನ್ನು ಬಿಚ್ಚಿ ತೆರೆದು ಸಹ ನೋಡಲಿಲ್ಲ.

ಅರ್ಧ ಗಂಟೆಯ ನಂತರ ಅವರಿಬ್ಬರೂ ಬಂದಾಗ ಮೂರು ಪೇಪರುಗಳನ್ನೂ ಮೇಜಿನ ಮೇಲೆ ಮೊದಲಿನ ಹಾಗೆ ಇಟ್ಟು ಬರುವ ಕೆಲಸವು ನಿರ್ವಿಘ್ನವಾಗಿ ನೆರವೇರಿತು.

ಇಷ್ಟೊಂದು ಅಪಾಯಕಾರಿ ಕೆಲಸವನ್ನು ನಾನು ಮಾಡಿಬಿಟ್ಟದ್ದೆ. ಆದರೆ ಇಷ್ಟೆಲ್ಲಾ ಸಂಕಟ, ಅಪಾಯ ಎದುರಿಸಿ ತಂದ ಪೇಪರನ್ನು ತೆರೆದು ಏನಾದರೂ ಬರೆಯಲು ಆಗಲಿಲ್ಲ. ಹೀಗೇಕಾಯಿತು? ಇದು ಏನು...

೧೧

ನಾನು ಸುಮ್ಮನಿದ್ದೆ, ಸುಮ್ಮನಿದ್ದೇನೆ.

ಮೌನವಿದು. ಎಂದೂ ಮುರಿಯಲಿಕ್ಕಿಲ್ಲ ಎನಿ ಸುತ್ತದೆ! ಇದನ್ನು ನಾನು ಮುರಿಯಲಾರದವ ನಾಗಿದ್ದೇನೆ. ಕಾಲವೂ ಇದನ್ನು ಮುರಿಯದಾಗಿದೆ.

ಕಾಲವೂ ಬಹಳಷ್ಟನ್ನು ಮುರಿದಿದೆ. ಉದಾ ಹರಣೆಗಾಗಿ ಶಾಂತಿ ಭವನ. ಅದರ ಸ್ಥಾನದಲ್ಲಿ ಇನ್‌ಕಂ ಟ್ಯಾಕ್ಸಿನ ಸರಕಾರೀ ಕಟ್ಟಡವೊಂದು ತಯಾರಾಗತೊಡಗಿತ್ತು. ಆ ತಯಾರಾಗುತ್ತಲಿದ್ದ

ಇನ್‌ಕಂಟ್ಯಾಕ್ಸಿನ ಕಟ್ಟಡವನ್ನು ನೋಡಿ ವಿನೋದ ನೆಂದಿದ್ದ: "ಎಲ್ಲಿ ಜೀವನಕ್ಕೋಸುಗ ಗಳಿಸುವ ಸದವಕಾಶವಿರುವುದಿಲ್ಲವೋ ಖರ್ಚುಮಾಡಲಿಕ್ಕೂ ಅವಕಾಶ ಇರುವುದಿಲ್ಲವೋ ಅಲ್ಲಿ ಉಸಿರಿನ ಮೇಲೂ ಟ್ಯಾಕ್ಸ್ ಹಾಕಬೇಕು. ಜನರ ಉಸಿರಿ ನೊಳಗಿಂದ ಸ್ವಲ್ಪ ಉಸಿರನ್ನು ಹೊರ ತೆಗೆದು' ಸರಕಾರದ ಮೂಠಿಯಲ್ಲಿ ತುಂಬಬೇಕು... ಅಂತ."

ಕಾಲವು ವಿನೋದನನ್ನು ಮುರಿದಿದೆ...... ಕಳೆದ ಒಂದು ವರ್ಷದಿಂದ ವಿನೋದ ಹುಚ್ಚರ ಆಸ್ಪತ್ರೆಯಲ್ಲಿದ್ದಾನೆ. (ಅವನ ಭೇಟಿಗೆಂದು ಹೋದೆ. ನನ್ನನ್ನು ಗುರುತಿಸಲಿಲ್ಲ. ಆಗಾತ ಹಾಡುತ್ತಿದ್ದ. 'ಆಯ್ ಆ್ಯಮ್ ದಿ ಬೆಸ್ಟ್ ಕ್ರಿಯೇಶನ್ ಆಫ್ ಗಾಡ್ ಬ್ಲೆಸ್ಡ್ ವಿಥ್ ಹಾರರ್ ಆ್ಯಂಡ್ ಮಿಜರಿ...')

ತನವೀರ ಗುಪ್ತ ರಾಜಕೀಯ ಪಾರ್ಟಿಯಲ್ಲಿ ಸೇರಿಕೊಂಡಿದ್ದ. ವಿದೇಶೀ ಶಸ್ತ್ರಗಳ ಕಳ್ಳಸಾಗಾಟದ ಅಪರಾಧದಲ್ಲಿ ಪೋಲೀಸರ ಕೈಗೆ ಸಿಕ್ಕು ಅವರಿಂದ ಜಖಂ ಆಗಿ ಈಗ ಜೇಲಿನಲ್ಲಿ ಇದ್ದಾನೆಂದೂ ಸುದ್ದಿ ಬಂದಿತ್ತು.

ಅಶೋಕ ವಿಚಿತ್ರ ರೀತಿಯಲ್ಲಿ ಸೋತು ಹೋಗಿದ್ದಾನೆ. ಸರಕಾರೀ ಕಟ್ಟಡದ ಮೇಲೆ ಮೋಜಾಯಿಕ್ ಚಿತ್ರಿಸುವ ಗುತ್ತಿಗೆಯನ್ನು ಪಡೆದಿದ್ದಾನೆ. ಇದಕ್ಕಾಗಿ ಸರಕಾರೀ ನೌಕರರಿಗೆ ನಿರ್ದಿಷ್ಟ ದರಗಳಲ್ಲಿ ಲಂಚ ಕೊಡುತ್ತಾನೆ. ಕೇವಲ ಸರಕಾರೀ ಕಚೇರಿಗಳ ಸಂಬಂಧ ಕಾಯಂ ಇಟ್ಟುಕೊಳ್ಳುವ ಪ್ರಯತ್ನದಲ್ಲಿ ತೊಡಗಿರುತ್ತಾನೆ

ಶಿರೀನಳದು ಬಹಳ ಕಠೋರ ಜೀವ. ಅವಳು ಮದುವೆಯಾಗಬೇಕಿತ್ತು; ಆದಳು. ಆದರೆ ಅವಳ ಗಂಡ ಅವಳೊಡನೆ ಅವಶ್ಯವಾಗಿದ್ದ ತಿಳುವಳಿಕೆ ವಿಶ್ವಾಸದಿಂದ ನಡೆದುಕೊಳ್ಳಲಿಲ್ಲ. ಅವಳೀಗ ಚಿಕ್ಕ ಮಗಳೊಬ್ಬಳ ತಾಯಿಯಾಗಿ ಶಾಲೆಯೊಂದರಲ್ಲಿ ನೌಕರಿ ಮಾಡುತ್ತಾಳೆ. ಮದುವೆಯ ಬಾಳು ಮೇಲೆ ಮೇಲೆ ಸಮ ಕಾಣಿಸುತ್ತದೆ, ಆದರೆ ಅವಳು ದಿನಾಲೂ ಎಲ್ಲಿ ಹೊಲಿಗೆ ಬಿಚ್ಚಿದೆಯೋ ಅಲ್ಲಿ ಹೊಲಿಯುತ್ತಿರುತ್ತಾಳೆ. ಅವಳು ಸೋತಿದ್ದಾಳೆ; ಆದರೆ ಪರಾಜಿತಳಾಗಿಲ್ಲ...

ಕಾಲವು ನನ್ನದೇನನ್ನೂ ಮುರಿಯದಿದ್ದರೂ ವಯಸ್ಸಿನ ಒಂದು ತುಂಡನ್ನು ಅವಶ್ಯವಾಗಿ ಮುರಿದಿದೆ. ಡಿಗ್ರಿ ಸಿಕ್ಕಿದ ನಂತರ ಚಿಕ್ಕ ನೌಕರಿಯೂ ಸಿಕ್ಕಿತ್ತು. ತಾಯಿಯೊಡನೆ ನೆಲಸಿದ್ದೆ. ಗಡಿಯಾರದ ಮುಳ್ಳುಗಳಂತೆ ಮನೆಯಿಂದ ಕಚೇರಿ ಕಚೇರಿಯಿಂದ ಮನೆಗೆ ಅಲೆಯುತ್ತೇನೆ. ಒಂದು ವರ್ತುಲದಲ್ಲಿ ಸುತ್ತುತ್ತಿರುತ್ತೇನೆ.

ಮತ್ತು ರಿಕ್ಕೀ?...

ರಿಕ್ಕೀ ಭೇಟಿಯಾಗಿದ್ದಳು. ನಸುಕಿನಲ್ಲಿ ಅಜ್ಜಿಯನ್ನು ನೋಡಿ ಬರಲು ಅವಳಿರುವ ಹಳ್ಳಿಗೆ ನನ್ನ ಕಾರಲ್ಲಿ ಹೊರಟಿದ್ದೆ (ತಾಯಿ ಕೋಡುಕೊಟ್ಟಿದ್ದು). ನಾನು ಏಅರ್ ಲೈನ್ ಬಳಿಯ ಪೆಟ್ರೋಲ್ ಬಂಕಿನಲ್ಲಿ ಪೆಟ್ರೋಲ್ ತುಂಬಿಸಿಕೊಳ್ಳುತ್ತಿದ್ದೆ. ಅಷ್ಟರಲ್ಲಿ ಏಅರ್ ಲೈನ್ ಕಚೇರಿಯ ಮುಂದೆ ವಿಮಾನ ನಿಲ್ದಾಣದಿಂದ ಬಂದು ನಿಂತ ಬಸ್ಸಿನಿಂದ ರಿಕ್ಕೀ ಇಳಿದಳು.

ರಿಕ್ಕೀ ನನ್ನನ್ನು ನೋಡಿದಳು. ನನ್ನ ಬಳಿ ನಿಂತು, "ನಾನೊಬ್ಬಳೇ ಇದ್ದೇನೆ. ನನ್ನ ಜೊತೆಗೆ ಯಾರೂ ಇಲ್ಲ," ಎಂದು ನನ್ನ ಮನಕ್ಕೆ ಉತ್ತರಿಸಿದಳು.

"ನಡೆ, ಎಲ್ಲಿಗೆ ಬೇಕೋ ಅಲ್ಲಿಗೆ ಮುಟ್ಟಿಸಿ ಬರುತ್ತೇನೆ." ರಿಕ್ಕೀ ಕಾರಿನಲ್ಲಿ ನನ್ನ ಎಡಭಾಗದಲ್ಲಿ ಕುಳಿತಳು. "ನೀನಿಷ್ಟು ಬೆಳಗ್ಗೆ ಎಲ್ಲಿಗೆ ಹೋಗುತ್ತಿದ್ದೀ?"

"ನಾನು ಉತ್ತರಿಸಿದೆ. ನೂರು ಮೈಲಿ ದೂರದಲ್ಲಿನ ನನ್ನ ಅಜ್ಜಿಯ ಊರಿಗೆ."

"ಸರಿ, ಗಾಡಿಯನ್ನು ನಡೆಸು, ನಿಲ್ಲಿಸಿರುವಿಯೇಕೆ?"

"ನೀನೂ ನನ್ನ ಸಂಗಡ ಬರುವಿಯೊ?"

"ಹೂಂ."

ಊರ ಹೊರಗೆ ಗಾಡಿ ಒಯ್ದು, ಈಗಲ್ಲದಿದ್ದರೂ ಸರಿ, ಇನ್ನು ಅಲ್ಪಾವಧಿಯಲ್ಲಿ ಗಾಡಿಯನ್ನು ನಗರದ ಕಡೆಗೆ ತಿರುಗಿಸಲು ರಿಕ್ಕೀ ಹೇಳಬಹುದೆಂದು ಯೋಚಿಸುತ್ತಿದ್ದೆ.

ರಿಕ್ಕೀ ಏನೂ ಹೇಳಲಿಲ್ಲ. ನಾನೇ ಸ್ವಲ್ಪ ಸಮಯದ ನಂತರ, "ನಾನು ವಾಪಾಸಾಗುವುದು ರಾತ್ರಿಗೆ. ಇಲ್ಲಿ ಯಾರಾದರೂ ನಿನ್ನ ದಾರಿ ನೋಡುತ್ತಿರಬಹುದು," ಅಂದೆ.

"ಇಲ್ಲಿ ಯಾರೂ ಇಲ್ಲ. ಕೇವಲ ಪಾಸ್‌ಪೋರ್ಟ್ ಮಾಡಿಸಿಕೊಳ್ಳಲು ಈ ನಗರಕ್ಕೆ ಬಂದಿರುವೆ. ಇಂದಿಲ್ಲದಿದ್ದರೆ ನಾಳೆ ಮಾಡಿಸಿಕೊಳ್ಳುವೆ."

ಇದೇ ದಿನ ನನಗೆ ಅಕಸ್ಮಾತ್ ಏಕೆ ಹೇಗೆ ಏತಕ್ಕೋಸ್ಕರವಾಗಿ ಸಿಕ್ಕೀತು ? ಈ ದಿನವೆಂದರೆ ರಸ್ತೆಯಮೇಲೆ ಹೋಗುವಾಗ ಅಕಸ್ಮಾತ್ ಒಂದು ಅಮೂಲ್ಯ ವಸ್ತು ನನಗೆ ಸಿಕ್ಕಂತೆನಿಸುತ್ತಿತ್ತು. ಏಕೆಂದರೆ ಆ ವಸ್ತು ನನ್ನದಲ್ಲ, ಪರರದು.

“ನನಗೆ ಲಗ್ನವಾಗಿದೆ, ಒಬ್ಬ ಮಗನಿದ್ದಾನೆ. ಅವರೀಗ ಇಂಗ್ಲೆಂಡಿನಲ್ಲಿರುವುದರಿದ ನಾನೂ ಅಲ್ಲಿಗೆ ಹೋಗಬೇಕಾಗಿದೆ” ಎನ್ನುತ್ತಾ ನಗತೊಡಗಿದಳು. “ನಾನೂ ಒಮ್ಮೆ ನಾಲ್ಕುನೂರಾ ಎಪ್ಪತ್ತು ರೂಪಾಯಿ ಶೇಖರಿಸಿ ಮುಂಬೈಯಿಂದ ದೋಣಿಯಲ್ಲಿ ಬಸ್ರಾಕ್ಕೆ ಹೋಗಬೇಕೆಂದು ಮಾಡಿದ್ದೇನೆಂದು ಹೇಳಿದ್ದು ನಿನಗೆ ನೆನಪಿದೆಯಾ?... ಮತ್ತು ನಿನ್ನೊಡನೆ?...”

ನಾನು ಅವಳಿಗೆ ಏನೂ ನೆನಪಿಸಕೂಡದೆಂದು ಸುಮ್ಮನಿದ್ದೆ. ಪುನಃ ಪ್ರಶ್ನಿಸಲು, “ನೆನಪಿದೆ” ಎಂದು ಹೇಳಲೇಬೇಕಾಯಿತು.

“ಈಗ ನಮ್ಮಲ್ಲಿ ಬಹಳಷ್ಟು ಹಣ ಇರಬಹುದು. ಆದರೆ ಆ ನಾಲ್ಕುನೂರಾ ಎಪ್ಪತ್ತು ರೂಪಾಯಿ ಯಾರ ಹತ್ತಿರವೂ ಇರಲಾರದು...” ಎಂದು ರಿಕ್ಕೀ ಹೇಳುತ್ತಿದ್ದಳು.

“ನಾನು ಮತ್ತು ನನ್ನ ತಂದೆ ಇಬ್ಬರಲ್ಲಿ ಒಬ್ಬರು ಸೋಲಬೇಕಾಗಿತ್ತು. ಆದರೆ ಅವರು ಸೋಲಲಿಲ್ಲ. ನಾನೇ ಸೋತೆ. ಈ ಸೋಲಿನಿಂದ ತಾಯಿ ತಂದೆ ಎಲ್ಲರಿಗೂ ಸಂತೋಷ.”

“ನಿನಗೆ?...”

“ಬಾಳೆಲ್ಲ ಆರಾಮವಾಗಿದೆ. ಮತ್ತೆ ಇಂದಿನ ದಿನವನ್ನು ನನ್ನ ಜೀವನದಿಂದ ಕದಿಯಲು ಅವಕಾಶ ಸಿಕ್ಕಿದೆ. ಅದರರ್ಥ ನನಗೆ ಎಲ್ಲಿಯಾದರೂ ಯಾವ ಸ್ಥಳದಲ್ಲಿಯಾದರೂ ಸರಿಯೆ, ಇದರ ಅಗತ್ಯ ಬಹಳವಾಗಿತ್ತು. ಸ್ಪಷ್ಟವಾಯಿತಲ್ಲವೇ?”

“ಸ್ಪಷ್ಟವಾಯಿತು” ಎಂದೆ.

“ಏನು ಸ್ಪಷ್ಟವಾಯಿತು? ಯಾವುದು ನೇರವಾದ ಕಡೆಯಿಂದ ಇದೆಯೋ ಅದು ಅದರ ವಿರುದ್ಧ ದಿಕ್ಕಿನಿಂದಲೂ ಸರಿಯಾಗಿಯೇ ಇದೆ.”

ಬಹಳಷ್ಟು ದೂರ ಬಂದಿದ್ದೆವು. ಅವಳೆಂದಳು, “ಲಾಸ್ಟ್ ರೈಡ್ ಟುಗೆದರ್.” ನಾನೆಂದೆ, “ಫಸ್ಟ್ ರೈಡ್ ಟುಗೆದರ್.” ನಾವಿಬ್ಬರೂ ಚಿಕ್ಕ ದಾರಿಯ ಮೇಲೆ ಇದಕ್ಕೂ ಮುಂಚೆ ನಡೆದಿದ್ದಿಲ್ಲ. ಆದರೆ ರಿಕ್ಕೀಯ ಮಾತು ನಿಜ, ಅನಂತರ ನಾವು ಹೋಗುವುದೆಲ್ಲಿಗೆ?

ನನ್ನ ಅಜ್ಜಿಯ ಊರ ಕಡೆಯ ಕಚ್ಚಾರಸ್ತೆ ಕಾಣಿಸಿತು. ಒಂದು ಕಟ್ಟಿಗೆಯ ಕಂಬದ ಮೇಲೆ ಒಂದು ಅಡ್ಡ ಹಲಗೆಯಲ್ಲಿ ಬರೆಯಲಾಗಿತ್ತು, ‘ಫತಹ್‌ಗಡ’. ತುಂಬಾ ಧೂಳಿನ ಕಚ್ಚಾರಸ್ತೆಯಲ್ಲಿ ಏಳುತ್ತಲಿದ್ದ ಧೂಳಿನ ಬಲೂನುಗಳ ಬಗ್ಗೆ ನಾನೆಂದೆ, “ಮುಂಬೈಯಿಂದ ಬಸ್ರಾಕ್ಕೆ ಹೋಗುತ್ತಿದ್ದರೆ ಮುಂದೆ ಕುವೈತ್ ಬರುತ್ತಿತ್ತು. ಅಲ್ಲಿ ಕೇವಲ ಉಸುಕಿನಿಂದ ಇಂಥದೇ ಬೆಲೂನು ಏಳುತ್ತಿದ್ದವು.”

“ಅಲ್ಲಿ ನಾನು ಥರ್ಮಾಸಿನಿಂದ ನೀರು ತೆಗೆದು ನಿನಗೆ ಆಗಾಗ್ಗೆ ಕುಡಿಸುತ್ತಿದ್ದೆ,” ಎಂದು ನಕ್ಕಳು.

“ಇದೆಲ್ಲದರಿಂದ ನಿನಗೆ ದಿನದಲ್ಲಿ ಎಷ್ಟು ಬೇಜಾರು ಬರುತ್ತಿತ್ತು!”

“ಹಾಗೆ ಬರಿ ಬಾಯಿಂದ ಹೇಳುವುದರಿಂದೇನು ಪ್ರಯೋಜನ?” ಎಂದು ರಿಕ್ಕೀ ಮಾತು ಮರೆಸಿದಳು ಎನಿಸಿತು.

“ಈಗ ಪ್ರಮಾಣವೇನಿಲ್ಲ. ಹೀಗೆ ಬಾಯಿಂದಾದರೂ ಸರಿ,” ನಾನು ನಿರುದ್ದೇಶದಿಂದ ಮಾತು ಮುಂದುವರೆಸಿದ್ದೆ.

“ಪ್ರಮಾಣ ಇರಬಹುದು.” ರಿಕ್ಕೀ ಉತ್ತೇಜಿತಳಾಗಿದ್ದರಿಂದ ನನಗೆ ಗಾಬರಿಯಾಯಿತು.

“ಈಗಾಗಲೇ ಇಲ್ಲಿಂದ ಉಸುಕಿನ ಬಯಲಿಗೆ ಗಾಡಿ ತಿರುಗಿಸು. ಕುವೈತಿನ ಉಸುಕು ಇರಲಿ, ಬೇರೆಲ್ಲಿಯಾದರೂ ಇರಲಿ...” ಒಂದೇ ಉಸುರಿಗೆ ರಿಕ್ಕೀ ಹೇಳಿದಳು.

“ನನ್ನ ಉಸಿರು ಸ್ವಲ್ಪ ಬಿಸಿಯಾಯಿತು. ಬಾಯಿಂದ ಅಂದುಬಿಟ್ಟೆನೆಂದು ತೋರುತ್ತದೆ ಮುಂಚೆ ರಸ್ತೆಯಲ್ಲಿ ತಂದೆ ಇದ್ದ...ಈಗ...”

“ಈಗ ಮೂವರು, ತಂದೆ, ಗಂಡ, ನನ್ನ ಮಗ. ಆದರೆ ಕಪಿಲ, ಒಂದು ಸಲ ಆಗಲಾರದ್ದು ಮತ್ತೆ ಆಗುವುದಿಲ್ಲವೇ? ನಾನು ಒಂದು ಸಲ ಸೋತದ್ದು ನನ್ನ ಪಾಪೇನು ಮಾಡಿಬಿಟ್ಟಿತು ಎನ್ನುತ್ತೀಯಾ ? ಅದರಿಂದ ಮೂರು ಪಟ್ಟು ಕಷ್ಟಗಳು ಬಂದವು. ಅವುಗಳ ಎದುರಿಗೆ...” ರಿಕ್ಕೀಯ ಗಂಟಲಲ್ಲಿ ಈ ಶಬ್ದಗಳು ಒದ್ದೆಯಾಗಿದ್ದವು ಎನಿಸಿತು. ಮಾತು ಹೀಗೆ ತಿರುಗಿತು—

ರಿಕ್ಕೀ ಅನ್ನುತ್ತಿದ್ದಳು– “ನಾನು ಇದೀಗ ಸೋತು

ತ್ತಿದ್ದೆ– 'ಲಾಸ್ಟ್ ರೈಡ್ ಟುಗೆದರ್' ಅಂತ, ನೀನು ಹೇಳುತ್ತಿದ್ದೆ. 'ಫಸ್ಟ್ ರೈಡ್ ಟುಗೆದರ್.' ಇದನ್ನು ಫಾಸ್ಟ್ ರೈಡ್ ಮಾಡಲಾರೆಯಾ ?"

"ಯೂ ಆರ್ ರಿಯಲೀ ಮ್ಯಾಡ್" ಉತ್ತರಿಸುತ್ತಾ, ನನ್ನ ಎಡತೋಳನ್ನು ರಿಕ್ಕೀಯು ಹೆಗಲ ಮೇಲೆ ಹಾಕಿದೆ.

"ನಿನಗೆ ನೆನಪಿದೆಯೇನು– ಕೊನೆಯ ಬಾರಿ ಡ್ಯಾನ್ಸ್ ಮಾಡಿದಾಗ ಹಾಕಿದ್ದ ರೆಕಾರ್ಡ್– 'ಲೆಟ್ ಅಸ್ ಸೊ ದಿ ಅರ್ಥ್ ವಿತ್ ಕ್ರೇಜೀ ಡ್ರೀಮ್ಸ್...'" ಎಂದು ಗುನುಗುನಿಸುತ್ತಾ, ನನ್ನ ಹೆಗಲ ಮೇಲೆ ತಲೆಯಿಟ್ಟಳು.

"ಆದರೆ ರಿಕ್ಕೀ, ಈ ಭೂಮಿಯಲ್ಲಿ ಹಾಡು ಹುಟ್ಟುವುದಿಲ್ಲ."

ಆಗ ನನ್ನ ಮನಸ್ಸಿನಲ್ಲಿ ನಾನಿದ್ದಿಲ್ಲ. ರಿಕ್ಕೀಯಾಗಲಿ ಅವಳ ಪತಿಯಾಗಲಿ ಇದ್ದಿಲ್ಲ. ಕೇವಲ ರಿಕ್ಕೀಯು ಮಗನಿದ್ದ. ನಾನೆಂದೂ ನೋಡದ ಮಗ...

ಇಲ್ಲ, ಆ ಮಗ ನಾನೇ ಆಗಿದ್ದೆ.

ನನ್ನ ತಂದೆ ತಾಯಿ ಒಬ್ಬರನ್ನೊಬ್ಬರು ಬಿಟ್ಟು ಬೇರೆಯಾಗಿದ್ದಾಗ ನಾನು ಆ ಮಗನನ್ನು ನೋಡಿದ್ದೆ. ಈಗ ನಾನು ದೊಡ್ಡವನಾಗಿ ಗಂಡಸಾಗಿದ್ದರೂ ಆ ಮಗನ ನೆನಪಿನ್ನೂ ಇತ್ತು. ಆ ಮಗ ಯಾವಾಗಲೂ ರಾತ್ರಿಯಲ್ಲಿ ಹೆದರಿ ಅಳುತ್ತಿದ್ದ, ರಿಕ್ಕೀಯು ಮಗನ ರೂಪವೂ ಆ ಮಗನಂತೆ ಆಗುವುದರಲ್ಲಿತ್ತು.

ಇಲ್ಲ... ಇಲ್ಲ... ಹಾಗಾಗದಾರದು. ನಾನವನಿಗೆಂದೆ– "ನಾನು ನಿನಗೇನೂ ಕೊಡಲಾರೆ. ಆದರೆ ನಿನ್ನಿಂದ ಏನೂ ಕಸಿದುಕೊಳ್ಳುವುದಿಲ್ಲ..." ರಿಕ್ಕೀಯು ಹೆಗಲಿಂದ ನನ್ನ ತೋಳನ್ನು ತೆಗೆದುಕೊಂಡೆ.

ರಿಕ್ಕೀ ಉದಾಸಳಾಗಿದ್ದಳು. ನಾನಾದರೂ ಅಷ್ಟೇ. ಆಗ ಎಲ್ಲಿಯೋ ದೂರದಲ್ಲಿ ಒಂದು ತೊಟ್ಟಿಲಲ್ಲಿ ಒಂದು ಗಂಡು ಮಗು ನಗುತ್ತಲಿತ್ತು, ಎಂದು ನನ್ನ ವಿಚಾರ...

ಕಾಜು ಮುಚ್ಚಿದ್ದರೂ ಬಟ್ಟೆಯ ಮೇಲೆ ಬೀಳುತ್ತಿದ್ದ ಧೂಳನ್ನು ಜಾಡಿಸುತ್ತ ನಾನೆಂದೆ, "ಈ ಜಾಗಕ್ಕೆ ಘತಹಗಡವೆಂದೇಕೆ ಹೆಸರಿಟ್ಟರು? ಬಹುಶಃ ಬಹಳಷ್ಟು ಹುಡಿಯನ್ನು ಗೆದ್ದು ಹೋಗಬೇಕಾಗುತ್ತದೆಯೆಂದು ಇರಬಹುದು..."

ರಿಕ್ಕೀ ಏನೋ ನೆನಪಿಸಿಕೊಳ್ಳುತ್ತಾ ಅನ್ನತೊಡಗಿದಳು; "ತಿರುವಿನ ಬಳಿ ಕಂಬದ ಮೇಲಿಂದ ಹಲಗೆಯ ಮೇಲೆ 'ಘತಹಗಡ' ಎಂದು ಬರೆದಿದ್ದನ್ನು ನೋಡಿದಾಗಿನಿಂದ ಈ ಶಬ್ದದ ಅರ್ಥವೇನೆಂಬುದನ್ನು ಯೋಚಿಸುತ್ತಲಿದ್ದೆ. ವಿಲಕ್ಷಣ ಸ್ಪೆಲ್ಲಿಂಗ್ ಇತ್ತು, ಪಿ ಎಚ್ ಎ ಟೀ ಈ ಎಚ್:"

"ಹಾಗಿರಲಿಲ್ಲ. ನಾನು ಸ್ವತಃ ಹಲಗೆಯ ಮೇಲೆ ಬರೆದದ್ದು ಓದಿದ್ದೆ: ಎಫ್ ಎ ಟೀ ಈ ಎಚ್" ಎಂದೆ.

"ಇಲ್ಲ, ಹಾಗಿರಲಿಲ್ಲ," ಎಂದು ರಿಕ್ಕೀ ನಿರಾಕರಿಸಿದಳು.

"ಶರ್ತು ಏನು?"

"ಶರ್ತು– ನೀನು ಹೇಳಿದ್ದು" ಎಂದು ನಾನು ಉತ್ತರಿಸಿದ್ದೆ. ನಾನು ಗೆಲ್ಲುವುದರಲ್ಲಿ ಸಂಶಯವಿರಲಿಲ್ಲ. ನನ್ನದೇ ಸರಿಯೆಂಬ ವಿಶ್ವಾಸವಿತ್ತು. ತನ್ನದೆ ಸರಿಯೆಂದೂ ರಿಕ್ಕೀಗೆ ವಿಶ್ವಾಸ.

"ಒಳ್ಳೇದು. ಹಾಗಾದರೆ ನಾನು ಗೆದ್ದರೆ ಇದು ಫಸ್ಟ್ ರೈಡು, ಸೋತರೆ ಲಾಸ್ಟ್ ರೈಡ್," ಎಂದಳು ರಿಕ್ಕೀ.

"ಸರಿ ಒಪ್ಪಿದೆ. ಇಲ್ಲಿಂದಲೇ ಬಹುಶಃ ನೇರವಾಗಿ ಉಸುಕಿನ ಬಯಲಿಗೆ ಹೋಗಬೇಕಾಗುವುದು ಎಂದು ಅರ್ಥವಾಗಬಹುದು!" ಎಂದು ನಗಲಾರಂಭಿಸಿದೆ.

"ಈಜಂಟ್ ಇಟ್ ಎ ಕ್ರೇಜಿ ಡ್ರೀಮ್ ?" ರಿಕ್ಕೀ ನಕ್ಕಳು.

ಆತುರದಿಂದ ಗಾಡಿಯನ್ನು ತಿರುಗಿಸಿದೆ...ಹಲಗೆಯ ಮೇಲೆ ಬರೆದಿತ್ತು. 'ಘತಹಗಡ'– ಎಫ್ ಎ ಟೀ ಈ ಎಚ್'– ನಾನು ರಿಕ್ಕೀಯು ಕೈ ಹಿಡುಕಿ ಎಂದೆ, "ಸೋ ಇಟ್ ಈಜ್ ದಿ ಲಾಸ್ಟ್ ರೈಡ್, ಆವರ್ ಫೇಟ್..." ರಿಕ್ಕೀಯು ಮುಖ ಕಳೆಗುಂದಿತ್ತು.

"ಓ ಗಾಡ್" ಎನ್ನುತ್ತಾ ರಿಕ್ಕೀ ಹಲಗೆಯ ಕಡೆಗೆ ಲಕ್ಷ್ಯಗೊಟ್ಟು ನೋಡುತ್ತಾ, ಹಲಗೆಯ ಮೇಲೆ ಬರೆದ ಶಬ್ದಗಳನ್ನು ಸ್ಪರ್ಶಿಸಿದಳು. ಅದೃಶ್ಯ ಕೈಗಳಿಂದ ಸ್ಪೆಲ್ಲಿಂಗ್ ಬದಲು ಮಾಡಲ್ಪಟ್ಟಿರುವವಂತೆ ಅನಿಸುತ್ತಿತ್ತು, ಮಸಿ ಹಸಿ ಇದೆಯೋ ಏನೋ ಎನ್ನುವಂತೆ ನೋಡುತ್ತಿದ್ದಳು. ಹಲಗೆ ತನಗೆ ಮೋಸ ಮಾಡಿರುವಂತೆ ಅವಳಿಗೆ ಅನಿಸಿತು.

"ಸೋ, ನಾನು ಮತ್ತೊಮ್ಮೆ ಸೋತೆ," ಅವಳ ಧ್ವನಿ ಉಡುಗಿತ್ತು. ಆಗ ನನಗೆ ಈ ಶರ್ತು ಏಕೆ ಹಾಕಿದೆನೋ, ನಾನೇಕೆ ಸೋಲಲಿಲ್ಲವೋ ಎಂದು ಪಶ್ಚಾತ್ತಾಪವಾಯಿತು.

ಹಲಗೆಯೊಡನೆ ಮಾತಾಡುತ್ತಿದ್ದ ರಿಕ್ಕೀಯ ಧ್ಯಾನ ಅದರ ಇನ್ನೊಂದು ಕಡೆಗೆ ಹೋಯಿತು. ಅಲ್ಲಿಯೂ ಘತಹಗಡ ಎಂದು ಬರೆದಿತ್ತು. ಆದರೆ ಸ್ಪೆಲ್ಲಿಂಗ್ ಪಿ ಎಚ್ ಎ ಟಿ ಈ ಎಚ್ ಎಂದಿತ್ತು. "ಕಪಿಲ! ನೋಡು! ನಾನು ಸ್ವತಃ ಕಣ್ಣಿಂದ ನೋಡಿದ್ದೇನೆಂದು ಹೇಳಿದ್ದಿಲ್ಲವೇ?" ಎಂದು ರಿಕ್ಕೀ ಹೈರಾಣಾಗಿ ಹೇಳಿದಳು. ರಿಕ್ಕೀಯೂ ತಪ್ಪು ಹೇಳಿದ್ದಿಲ್ಲ.

ನಾನು ಜೀವನದ ನಿಜವಾದ ಅಸ್ತಿತ್ವದಂತೆ ಸತ್ಯವಾಗಿದ್ದೆ.

ಆದರೆ ನಾವಿಬ್ಬರೂ ಗೆದ್ದೂ ಸೋತಿದ್ದೆವು.

ಈ ಹಲಗೆ ಆಟ ಜೀವನದ ವಿಚಿತ್ರ ಪಡಿಯಚ್ಚಿನ ಪ್ರತೀಕವಾಗಿದ್ದಿಲ್ಲವೇ? ಅದು ಪ್ರತಿಯೊಂದು ಕಡೆಯಿಂದಲೂ ಬೇರೆ ಕಾಣಿಸುತ್ತಿತ್ತು. ಆದರೆ ಯಾರು ಅದನ್ನು ಯಾವ ಕಡೆಯಿಂದ ನೋಡುತ್ತಾರೋ ಅವರಿಗೆ ಅದೇ ಸತ್ಯವಾಗಿ ತೋರುತ್ತಿತ್ತು.

ಸರಿ. ರಿಕ್ಕೀಯೊಡನೆ ಇದು ಕಡೆಯ ಭೆಟ್ಟಿ. ಅಜ್ಜಿಯ ಮನೆಗೆ ಇನ್ನೊಮ್ಮೆ ಹೋದರಾಯಿತೆಂದು ಹಿಂತಿರುಗಿದ್ದೆ.

ಅನುಮಾನ—ಊಹೆ ನನ್ನ ಮತ್ತು ರಿಕ್ಕೀಯ ಜೀವನ ಸದಾ ಒಂದು ಶಬ್ದದ ಸುತ್ತ ತಿರುಗಾಡುತ್ತಿದೆಯೆಂದು ಅನಿಸುತ್ತದೆ.

'ಫಿಶ್-ಪಾಂಡ್' ಗೇಮ್ ನಡೆದ ದಿನ, ಅವಳಿಗೆ ಮಿಸ್ ಕ್ರಿಮ್‌ಲಿನ್ ಎಂದಾಗ ಹೆದರಿಕೆಯಾಗಿತ್ತು. ಭಯದಿಂದ ನನ್ನ ಕೈ ಹಿಡಿದಳು.

ರಿಕ್ಕೀಯ ತಂದೆ-ತಾಯಿಗಳ ಕಠೋರರಾಗಿರುವುದನ್ನು ಕಂಡು ಗಾಬರಿಗೊಂಡಾಗ, ಅವಳು ಯಾರಲ್ಲಿಯಾದರೂ ವಿಶ್ವಾಸವಿಡಬೇಕಾಗಿತ್ತು. ಆ ವಿಶ್ವಾಸಕ್ಕೆ ನನ್ನನ್ನು ಕೇಳದೇ ನನ್ನನ್ನು ಆರಿಸಿಕೊಂಡಿದ್ದಳು.

ರಿಕ್ಕೀಯಲ್ಲಿ ಒಂದು ದಿನ ಕ್ರಾಂತಿಯು ಮೊತ್ತಿದಾಗ ತನವೀರನಂತೆ ದೇಶ ಬಿಡಲು ಯೋಚಿಸಿದ್ದಳು.

ನನ್ನನ್ನು ವಿಶ್ವಾಸವಿಟ್ಟು ಯೋಚಿಸಿದ್ದಳು.

ರಿಕ್ಕೀಗೆ ಕ್ರಾಂತಿ ಒಗ್ಗದ್ದರಿಂದ ಮೌನ ತಾಳಿದ್ದಳು. ಮೌನದಿಂದ ತನ್ನ ದುಃಖವನ್ನು ಅರ್ಧ ಅರ್ಧ ಮಾಡಿಕೊಂಡಳು. ತನ್ನ ಪಾಲಿನದನ್ನು ತನ್ನಲ್ಲಿಟ್ಟುಕೊಂಡು ನನ್ನ ಪಾಲಿನದನ್ನು ನನಗೆ ಕಳುಹಿಸಿದ್ದಳು. ನಾನೂ ಅನುಮಾನದಿಂದ ಒಪ್ಪಿಕೊಂಡೆ.

ಆದರೆ ಆ ಅನುಮಾನ ಯಾವುದು?

ನಾವು ಎಲ್ಲಿಯೋ ಹೋಗುವಾಗ ದಾರಿಯ ಮೇಲೆ ಸಿಕ್ಕಿದ್ದೆವು. ಆದರೆ ಮನುಷ್ಯ ನಡೆಯುವುದಿಲ್ಲ, ದಾರಿ ನಡೆಯುತ್ತದೆ ಎಂದು ಅನಿಸುತ್ತದೆ. ನಾನು ಮತ್ತು ರಿಕ್ಕೀ ಅಲ್ಲೇ ನಿಂತಿದ್ದೇವೆ. ಆದರೆ ದಾರಿ ಎಲ್ಲಿಂದಲೋ ಹೊರಟು ಎಲ್ಲಿಗೋ ಹೋಗಿ ತಲುಪಿದೆ.

ರಿಕ್ಕೀ ಆ ಮೇಲೆ ಕೈ ಚಾಚಿದಳು. ನಾನವಳ ಕೈ ಹಿಡಿದೆ. ಆದರೆ ಅಷ್ಟರಲ್ಲಿ ರಸ್ತೆಗಳು ಜೋರಾಗಿ ಹೋಗತೊಡಗಿದ್ದವು. ಈಗ ರಸ್ತೆಯ ಮೇಲೆ ನಿಂತ ನನಗೆ ದೂರದಲ್ಲಿ ಎಲ್ಲಿಯೂ ರಿಕ್ಕೀಯ ರಸ್ತೆ ಕಾಣಿಸುವುದಿಲ್ಲ...

ಆ ದಿನ ಘತಹಗಡದಿಂದ ನಗರದಲ್ಲಿ ಹೋಟೆಲಿನಲ್ಲಿ ರಿಕ್ಕೀಯನ್ನು ಬಿಟ್ಟಾಗ ಕೇಳಿದ್ದಳು– "ಕಪಿಲ, ನೀನೇಕೆ ಮೌನವಾಗಿದ್ದೀ?"

ನಾನವಳಿಗೆ ಹೇಳಿದ್ದೆ– "ಆ ದಿನ 'ಫಿಶ್-ಪಾಂಡ್ ಗೇಮ್' ನಡೆದಾಗ ನೀನು ನನ್ನ ಕೈ ಹಿಡಿದಾಗ ನನಗೆ ಒಂದು ಸುವರ್ಣ ಮೀನು ಕೈಗೆ ಸಿಕ್ಕಂತೆನಿಸಿತ್ತು. ಆದರೆ, ನನ್ನ ಕೈ ಮೀನು ಗಾಳವಾಗಬಾರದೆಂದು ನನ್ನ ಇಷ್ಟ..."

ರಿಕ್ಕೀ ಲವಲವಿಕೆಯಿಂದ ಕೇಳಿದಳು, "ಮತ್ತೇನೆನಿಸುತ್ತಿತ್ತು?"

"ಮತ್ತು ನಿನ್ನ ಶಿಥಿಲ ಕೈ ಕೆಳಗಿದ್ದ ನನ್ನ ಕೈ ಕೆರೆಯ ಭಾಗದಂತೆನಿಸಿ... ಅದರಲ್ಲಿ ನೀನು ಮೀನಿನ ಹಾಗೆ...ಬರಲು ಹೋಗಲು... ಸ್ವತಂತ್ರಳು..."

"ಅಯ್ಯೋ ದೇವರೇ..." ರಿಕ್ಕೀ ಉದ್ಗರಿಸಿದಳು.

ಈ ದಿನ ಸಹ ಆ ಹಳೆಯ ದಿನದ ಒಂದು ಭಾಗವಾಗಿತ್ತು. ಅದರ ಬಾಕಿ ಉಳಿದ ಭಾಗ

# ಈಗ!

# ನಿಮ್ಮ ಉಳಿತಾಯವನ್ನು 6 ವರ್ಷಗಳಲ್ಲಿ ಇಮ್ಮಡಿಗೊಳಿಸಿರಿ




## ಅಂಚೆ ಕಛೇರಿ
## ರಾಷ್ಟ್ರೀಯ ಉಳಿತಾಯ
## ಸರ್ಟಿಫಿಕೇಟ್‌ಗಳು

6ನೇಯ ಮತ್ತು 7ನೇಯ ಮಾಲಿಕೆ

- 12% ಬಡ್ಡಿ : ಸರಕಾರ ನೀಡುತ್ತಿರುವ ಅತ್ಯಂತ ಹೆಚ್ಚಿನ ದರ ; 6 ವರ್ಷಗಳಲ್ಲಿ ನಿಮ್ಮ ಉಳಿತಾಯವನ್ನು ಇಮ್ಮಡಿಗೊಳಿಸುವುದು.
- ಆದಾಯ ತೆರಿಗೆ ವಿನಾಯಿತಿ : ವರ್ಷಕ್ಕೆ ರೂ. 3000 ದವರೆಗೆ ಬಡ್ಡಿಯ ಮೇಲೆ.
- ಸಂಪತ್ತು ತೆರಿಗೆ ವಿನಾಯಿತಿ : ರೂ. 1,50,000 ದವರೆಗಿನ ಮೊತ್ತದ ಮೇಲೆ
- ಮಾನ್ಯತೆ ಪಡೆದ ಆಧಾರ ಪತ್ರ : ಕಂಟ್ರಾಕ್ಟರುಗಳು ಆಧಾರ ಪತ್ರವನ್ನಾಗಿ ನೀಡಬಹುದು



ಮೇಲಿನ ಲಾಭದಾಯಕ ಅಂಶಗಳಲ್ಲದೆ, ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟ್ ಯೋಜನೆಯ ಇತರ ಸೌಲಭ್ಯಗಳು :

• ಸುಲಭ್ಯ — ಯಾವುದೇ ಅಂಚೆ ಕಛೇರಿಯಲ್ಲಿ ಸರ್ಟಿಫಿಕೇಟ್‌ಗಳನ್ನು ನೀವು ಕೊಳ್ಳಬಹುದು. ನೀವು ಠೇವಣಿ ಇಡುವ ಮೊತ್ತಕ್ಕೆ ಯಾವುದೇ ಮಿತಿ ಇಲ್ಲ. ಇತರರ ಸಹಭಾಗಿತ್ವದೊಂದಿಗೆ ಅಥವಾ ವೈಯಕ್ತಿಕವಾಗಿ.

• ಅನುಕೂಲ — 3 ವರ್ಷಗಳ ನಂತರ ನಿಮ್ಮ ಠೇವಣಿಯನ್ನು ಬಡ್ಡಿ ಸಮೇತ ಹಿಂದೆಗೆದುಕೊಳ್ಳಬಹುದು.

• ಕೋರ್ಟು ವ್ಯವಹಾರಗಳಿಂದ ದೂರ — ಅನಿರೀಕ್ಷಿತ ಮರಣದ ಸಂದರ್ಭಕ್ಕೆಂದು, ನಾಮಕರಣ ಮಾಡಬಹುದು. ಕಾಲ ಮತ್ತು ಹಣವನ್ನು ವ್ಯಯಮಾಡುವ ಮೊಕದ್ದಮೆಗಳ ತೊಂದರೆಯಿರುವುದಿಲ್ಲ.

6ನೇ ಮಾಲಿಕೆಯಲ್ಲಿ, 12% ದರದಲ್ಲಿ ನಿಮ್ಮ ಚಕ್ರಬಡ್ಡಿ ಕೂಡಿಕೊಳ್ಳುತ್ತಿರುವುದು. ಆರು ವರ್ಷಗಳ ನಂತರ ಒಟ್ಟು ಮೊತ್ತ ನಿಮ್ಮ ಕೈಸೇರುವುದು.

7ನೇ ಮಾಲಿಕೆಯಲ್ಲಿ 12% ದರದಲ್ಲಿ ಪ್ರತಿ 6 ತಿಂಗಳಿಗೊಮ್ಮೆ ನಿಮ್ಮ ಬಡ್ಡಿಯನ್ನು ಪಡೆಯಬಹುದು. ಆರು ವರ್ಷಗಳ ನಂತರ ನಿಮ್ಮ ಅಸಲನ್ನು ಹಿಂದಿರುಗಿಸಲಾಗುವುದು.

| ಆರನೇ ಮಾಲಿಕೆ | | ಏಳನೇ ಮಾಲಿಕೆ | |
|---|---|---|---|
| ವರ್ಗ (ರೂ.) | 6 ವರ್ಷಗಳನಂತರದ ಒಟ್ಟು ಮೊತ್ತ (ರೂ.) | ವರ್ಗ (ರೂ.) | 6 ತಿಂಗಳಿಗೊಮ್ಮೆ ಬಡ್ಡಿ (ರೂ.) |
| 10 | 20.15 | | |
| 50 | 100.75 | | |
| 100 | 201.50 | 100 | 6 |
| 500 | 1007.50 | 500 | 30 |
| 1000 | 2015.00 | 1000 | 60 |
| 5000 | 10075.00 | 5000 | 300 |

ನಿಮ್ಮ ಇಂದಿನ ಮತ್ತು ಮುಂದಿನ ಜೀವನ — ಎರಡು ದೃಷ್ಟಿಯಿಂದಲೂ ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟ್ ಲಾಭದಾಯಕ ಮತ್ತು ಸುರಕ್ಷಿತ.

ವಿವರಗಳಿಗೆ

- ಯಾವುದೇ ಅಂಚೆ ಕಛೇರಿ
- ಅಧಿಕೃತ ಏಜೆಂಟ್
- ಉಳಿತಾಯ ಅಧಿಕಾರಿ c/o ಜಿಲ್ಲಾಧಿಕಾರಿಗಳ ಕಚೇರಿ



ಸಣ್ಣ ಉಳಿತಾಯಗಳ ನಿರ್ದೇಶನಾಲಯ

ಪ್ರಜ್ವಲಿತವಾದುದು.

"ಅಯ್ಯೋ ದೇವರೇ" ಅಂತ ರಿಕ್ಕೀ ಉದ್ಗರಿಸಿದಾಗ ನಾನೆಂದೆ,

"ನಾನು ಮೀನು ಹಿಡಿಯುವ ಗಾಳವಾಗಿದ್ದರೆ ನಿನಗೆ ಒಳ್ಳೆಯದೆನಿಸುತ್ತಿತ್ತೇನು?"

"ಇಲ್ಲ ಕಪಿಲ! ನೀನು ಸರೋವರ, ಅದೇ ಆಗರ. ಇದೇ ನಿನ್ನ ಸೌಂದರ್ಯದ ಗುಟ್ಟು. ಬಹುಶಃ ಇವರ ಮೇಲೇ ಇರುವುದು ನನ್ನ ಪ್ರೀತಿ. ಆದರೆ ನೀರಿಗೆ ಬರಲು ಹೋಗಲು ಸ್ವತಂತ್ರವಿಲ್ಲದ ಮೀನಿನ ಗತಿಯೇನು?"

ನನ್ನ ಬಳಿ ಉತ್ತರವಿದ್ದಿಲ್ಲ. ರಿಕ್ಕೀಯ ಬಳಿಯೂ ಇದ್ದಿಲ್ಲ. ಇನ್ನಾರ ಬಳಿಯೂ ಇದ್ದಿಲ್ಲ...

ನನ್ನ ಪಾಲಿನದೂ ರಿಕ್ಕೀಯ ಪಾಲಿನದೂ... ಇನ್ನೂ ಕೆಲವೇ ಅನುಮಾನಗಳಿದ್ದವು... ಬಹುಶಃ ಮುಂದೆಯೂ ವಯಸ್ಸಿನ ದಾರಿಗಳು ನಡೆಯುತ್ತ ನಡೆಯುತ್ತ ಎಲ್ಲಿಂದೆಲ್ಲಿಗೆ ಹೋಗಿ ತಲಪುವವೋ, ಆಗ, ನಾವು 'ಅನುಮಾನ' ಶಬ್ದದ ಸುತ್ತ ತಿರುಗುತ್ತಿರುತ್ತೇವೆ... ನಾವು ನಿಂತಿರುತ್ತೇವೆ... ನಮ್ಮನ್ನು ಅದೇ ಪ್ರದಕ್ಷಿಣೆ ಹಾಕುತ್ತಿರುತ್ತದೆ...

## ೧೨

"ಒಂದು ಕೋಣೆ, ಅಲ್ಲಿರುವ ಮಂಚಗಳಲ್ಲಿ ಒಂದರಲ್ಲಿ ತಾಯಿ, ಇನ್ನೊಂದರಲ್ಲಿ ತಂದೆ ಮಲಗಿರುತ್ತಾರೆ. ತೊಟ್ಟಿಲಲ್ಲಿದ್ದ ನಾನು ಇಳಿದು ಒಮ್ಮೆ ತಾಯಿಯ ಮಂಚದೆಡೆ, ಇನ್ನೊಮ್ಮೆ ತಂದೆಯ ಮಂಚದೆಡೆ ಹೋಗುತ್ತೇನೆ. ಪುಟ್ಟ ಅಂಗೈಯಿಂದ ತಾಯಿಯ ಮುಖ ಸ್ಪರ್ಶಿಸಿ ತಿರುಗಿದಾಗ ತಂದೆಯ ಮಂಚ ಇರುವುದಿಲ್ಲ. ಬಿಕ್ಕಿ ಬಿಕ್ಕಿ ಅಳುತ್ತೇನೆ. ತಾಯಿ ಎತ್ತಿಕೊಳ್ಳುತ್ತಾಳೆ...ನಾನು ಇಪ್ಪತ್ತನಾಲ್ಕು ಇಪ್ಪತ್ತೈದು ವಯಸ್ಸಿನವನಾಗುವವರೆಗೆ ಅರ್ಧರಾತ್ರಿಗೆ ಕಾಣುವ ಈ ಸ್ವಪ್ನದ ಪರಿಚಯ ನನಗಾಗಿತ್ತು. ಇನ್ನು ಇವನ್ನು 'ಮಿಡ್ ನೈಟ್ ವಿಜನ್' ಎಂದು ಗೇಲಿ ಮಾಡಿಕೊಳ್ಳಬಹುದಿತ್ತು.

ನನ್ನ ತಾಯಿ ಮತ್ತು ತಂದೆಯ ಡೈವೋರ್ಸ್

ಬಳಿಯಲ್ಲಿದ್ದರೂ ಒಮ್ಮೊಮ್ಮೆ ತಂದೆಯ ಬಳಿಗೆ ಹೋಗುತ್ತಿದ್ದೆ. ಅವರಿಬ್ಬರ ನಡುವಿನ ಮೌನದ ರಾಜ್ಯವನ್ನೂ ನಾನು ಕ್ರಮೇಣ ಮೌನದಿಂದ ಒಪ್ಪಿಕೊಂಡಿದ್ದೆ.

ಈ ಬಗ್ಗೆ ವಿಚಾರ ಮಾಡುತ್ತಿದ್ದಿಲ್ಲ. ಆದರೆ ನನ್ನ ಆ ಚೇತನ ನನ್ನ ತಂದೆ-ತಾಯಿ ಬೇರೆಯಾಗಿರುವುದನ್ನು ಒಪ್ಪಲು ನಿರಾಕರಿಸಿಬಿಟ್ಟಿತ್ತು.

ಈಗ 'ಈ ಮಿಡ್‌ನೈಟ್-ವಿಜನ್' ರೂಪ ಬದಲಾಯಿಸಿತ್ತು.

ನನ್ನ ಸ್ಥಾನದಲ್ಲಿ ನಾನೆಂದೂ ನೋಡಿರದ ರಿಕ್ಕೀಯ ಮಗನಿದ್ದ...ತಂದೆ ತಾಯಿಗಳ ಮಂಚ ಮಾಯವಾದಾಗ ಅವನು ಬಿಕ್ಕಿ ಬಿಕ್ಕಿ ಅಳುತ್ತಿದ್ದ.

ವಿಚಿತ್ರ ಟ್ರಾನ್ಸ್‌ಫರ್ ಮಿಸ್ಟ್ರ...ಅವಳಿಗೆ ಹೇಳಿದೆ, "ನಿನ್ನಿಂದ ಏನೂ ಕಸಿದುಕೊಳ್ಳಲಾರೆ." ಬಹುಶಃ ನನ್ನ ಹಾಗೆ ಆಗುವುದನ್ನು ತಪ್ಪಿಸಿದ್ದೆ. ಯಾವುದಾದರೂ ನೋವಿನ ಹೆಸರನ್ನು ಬದಲಾಯಿಸುವುದರಿಂದ ಆ ನೋವು ಮಾಯವಾಗುತ್ತದೆಯೇ?

ಒಮ್ಮೊಮ್ಮೆ ವಿಚಿತ್ರ ಸಂಗತಿಗಳು ನೆನಪಿಗೆ ಬರುತ್ತವೆ. ವಿಚಿತ್ರ ಏಕೆಂದರೆ ಅವು ಇದ್ದಕ್ಕಿದ್ದ ಹಾಗೆಯೇ ಕಾಣಿಸುತ್ತವೆ ಮತ್ತು ನಾನು ಗೊತ್ತಿದ್ದ ವಸ್ತುವನ್ನು ಹೊಸ ದೃಷ್ಟಿಯಿಂದ ನೋಡು ಮತ್ತೆಯೂ ಕಾಣಿಸುತ್ತದೆ.

ಇದೆಲ್ಲ ಅಕ್ರಮವಾಗಿ ನೆನಪಿಗೆ ಬರುತ್ತದೆ... ದಿನದಲ್ಲಿ ಕ್ರಮವಾಗಿ ನಡೆದ ಘಟನೆಗಳನ್ನು ರಾತ್ರಿಯಲ್ಲಿ ತಿರುವುಮುರುವಾದ ಸ್ಥಿತಿಯಲ್ಲಿ ನೋಡುತ್ತಿರುವ ತರಹ ಅಥವಾ ಅಗಸನ ಘಟ್ಟದಲ್ಲಿ ಪ್ಯಾಂಟಿಗೆ ಟವೆಲ್ಲು ಸುತ್ತಿದಂತೆ ಶರ್ಟಿನೊಳಗೆ ದಿಂಬಿನ ಚೀಲ ಬಿದ್ದಂತೆ, ಕಪಾಟಿನಲ್ಲಿ ಮಡಿಕೆ ಹಾಕಿ ಕ್ರಮವಾಗಿ ಇಟ್ಟ ಬಟ್ಟೆಗಳಂತೆ ನೆನಪಿಗೆ ಬರುತ್ತವೆ.

ಇನ್ನೊಂದು ನೆನಪು. ನಾವಿದ್ದ ಭೂತದ ಮನೆ ಅರ್ಥಾತ್ ಶಾಂತಿ ಮನೆಯನ್ನು ಕೆಡಹುತ್ತಿರುವಾಗ ಹೆನ್ರಿ ಮಿಲರ್‌ನ ಪುಸ್ತಕ ಓದುತ್ತಿದ್ದೆವು. ಅದರಲ್ಲಿ ಕೆಲವು ಕಲಾವಿದರು ಕುಳಿತು ಪೇಂಟ್ ಮಾಡುತ್ತಿರಲು... ಇಕ್ಕಟ್ಟಾದ ಮನೆಗಳನ್ನು ಕೆಡವಿ ಸುಂದರ ಮಾರ್ಕೆಟ್ ತಯಾ

ಮಿಲರ್ ಒಂದು ಸಾಲು ಬರೆದಿದ್ದನು.

"ದೇರ್ ವಿಲ್ ಬಿ ನಿಯೋನ್ ಲೈಟ್ ಶಾಪ್ ವಿಂಡೋಜ್ ಟು ಇನ್‌ಸ್ಪಾಯರ್ ದಿ ಆರ್ಟಿಸ್ಟ್ ಟು ಪೇಂಟ್–ಆರ್ ಮೋರ್ ಲಾಯಕ್ಲೀ ಪರ್ಸ್ಯುಯೇಡ್ ಹಿಮ್ ಟು ಕಮಿಟ್ ಸುಯಿಸಾಯಿಡ್."

ಆಗ ಈ ಸಾಲು ನಮ್ಮ ಸಲುವಾಗಿಯೂ ಇತ್ತು. ಆಗ ಯಾರಿಗೂ ಪ್ರಳಯ ಕಲ್ಪನೆಯಿರಲಿಲ್ಲ.

ಆದರೆ ಈ ಸಾಲು ಹವೆಯಲ್ಲಿ ತೂಗಾಡುತ್ತಿರುವಂತಿತ್ತು...

ಆದರೆ ಈ ಸಾಲು ಈಗ ಹೆಚ್ಚು ಹೆಚ್ಚು ಸತ್ಯವೆನಿಸುತ್ತದೆ...

ಜಗತ್ತಿನ ಪ್ರತಿಯೊಂದು ನಗರದ ಹೊಸ ಕಟ್ಟಡ, ಹೊಸ ಚರಂಡಿ ಮತ್ತು ಅವುಗಳಲ್ಲಿ ಕೊಳೆಯುವ ನಿತ್ಯದ ವಸ್ತುಗಳು ಮತ್ತು ಮನುಷ್ಯ ಜೀವನ ಇನ್ನಷ್ಟು, ಕಠಿಣ... ಇನ್ನಷ್ಟು ಕಠಿಣ...

ಎಷ್ಟು ಹೊಸ ಏರ್‌ಪೋರ್ಟುಗಳೋ ಅಷ್ಟೆ ಹುಚ್ಚರ ಮನೆಗಳು.

ಈ ಸಮಾಜದ ಮತ್ತು ಸಂಸ್ಕೃತಿಯ ಈ ಎಲ್ಲ ವಿಸ್ತಾರವು ನಿಜವಾದ ಜ್ವಾಲೆಯ ಬದಲು ಕೇವಲ ದಪ್ಪವಾಗಿ ಬಣ್ಣದಲ್ಲಿ ಬರೆದ ಬೆಂಕಿಯ ಅಕ್ಷರದಂತೆ ಇಲ್ಲವೇ ? ಇದರಿಂದ ಏನನ್ನೂ ಸುಡಲಾರೆವೇ?

ಹೀರೂ ವಿಚಿತ್ರ ಕ್ರೀಚರ್ ಆಗಿದ್ದ. ಆಗ ರಾಷ್ಟ್ರಪತಿಯು ನಿಧನವಾಗಿತ್ತು. ಚುನಾವಣೆಯ ನಡುವಿನ ಅವಧಿಯಲ್ಲಿ ಒಬ್ಬರು ಆ್ಯಕ್ಟಿಂಗ್ ಪ್ರೆಸಿಡೆಂಟ್ ಆಗಿದ್ದರು. ಅದೇ ದಿನಗಳಲ್ಲಿ ರೂಬಿಯ ತಾಯಿ ತೀರಿಹೋಗಿದ್ದರು. ಆಗ ಆವನ ತಂದೆಯಲ್ಲಿಗೆ ಸಂತಾಪ ಸೂಚಿಸಲು ಹೋದೆವು.

ಆಗ ಹೀರೂ ಸಂತಾಪ ಸೂಚಿಸುತ್ತ ಹೇಳಿದ: "ಅಂಕಲ್, ಚಿಕ್ಕ ಮಕ್ಕಳ ಸಲುವಾಗಿ ನೀವು ಇನ್ನೊಂದು ಮದುವೆಯಾಗಲೇಬೇಕು. ನೀವು ಮದುವೆಯಾಗುವವರೆಗೆ ಆ್ಯಕ್ಟಿಂಗ್ ವೈಫ್ ಇಟ್ಟುಕೊಳ್ಳಿರಿ–ಆಕ್ಟಿಂಗ್ ಪ್ರೆಸಿಡೆಂಟ್‌ರಂತೆ..."

ನಮಗೆಲ್ಲರಿಗೂ ನಾಚಿಕೆಯಾಗಿತ್ತು.

ನೆಂದದ್ದರಲ್ಲೇನೂ ತಪ್ಪಿರಲಿಲ್ಲ ಎನಿಸುತ್ತದೆ. ಒಬ್ಬರ ಸಂಬಂಧ ಆದರ ನಿಜವಾದ ರೂಪದಲ್ಲಿ ಎಲ್ಲಿದೆ? ತನ್ನ ಪೂರ್ಣ ಅಧಿಕಾರದಿಂದ? ಪೂರ್ಣ ಆಗತ್ಯಗಳಿಂದಲೆ? ಎಲ್ಲ ಕಾಲಕ್ಕೂ ಎಲ್ಲ ಸ್ಥಳದಲ್ಲೂ ದ್ದರಿಂದಲೇ ತಡೆದು ಕುಳಿತ.

ರೂಬಿಯ ಕಕ್ಕನೊಬ್ಬ ಹೆಂಡತಿ ಇದ್ದಾಗೂ ಇನ್ನೊಬ್ಬ ಹೆಂಗಸಿನೊಡನೆ ಕಾನೂನು ಬಾಹಿರ ಸಂಬಂಧವಿರಿಸಿಕೊಂಡಿದ್ದರು. ಆದರೆ ರೂಬಿಯ ಕಕ್ಕ ತೀರಿದ ದಿನವೇ ಆ ಹೆಂಗಸು ವಿಷಪ್ರಾಶನ ಮಾಡಿ ಸತ್ತುಹೋದಳು– ಅವರನ್ನು ಅಗಲದೇ.

ಇದೆಲ್ಲ ಅಗಸನ ಭಟ್ಟಿಯಲ್ಲಿ ಗಂಟು ಕಟ್ಟಿ ಇಟ್ಟ ಬಟ್ಟೆಗಳ ಹಾಗೆ. ಅಂತರವಿಷ್ಟೇ, ಆ ಬಟ್ಟೆಗಳು ಸ್ವಲ್ಪ ಸಮಯದ ನಂತರ ಹೊರಬಂದ ನೀಟಾಗಿ ಮಡಿಚಲ್ಪಡುತ್ತವೆ; ಆದರೆ ಇದೆಲ್ಲ ಸಂಬಂಧ ಯಾವ ಭಟ್ಟಿಯಲ್ಲಿ ಬಿದ್ದಿದೆಯೋ... ಹೊರಬರುವುದಿಲ್ಲ. ಶರೀರಕ್ಕೆ ಹೊದೆಯುವ ಬಟ್ಟೆಯಿಲ್ಲದೆ ಕೂತುಕೊಂಡವರಂತೆ ನಾವು ನಮ್ಮ ಸ್ವಪ್ನಗಳಿಗೆ ನಾಚಿಕೊಂಡು ಕೂತಿದ್ದೇವೆ...

■

ಕೆಲವು ದಿನಗಳ ಮುಂಚೆ ಶೀರಿನ್ ಒಂದು ಪತ್ರ ಬರೆದಿದ್ದಳು, "ಕಪಿಲ! ಒಮ್ಮೊಮ್ಮೆ ಬಹಳ ಬರೆಯಲಿರುತ್ತೆ. ಒಮ್ಮೊಮ್ಮೆ ಏನೂ ಇಲ್ಲ ಎನಿಸುತ್ತೆ.

ದೇಶದಲ್ಲಿ ರೂಪಾಯಿಯ ಅಪಮೌಲ್ಯ. ಇದು ಈಗಿನದು ನಿನಗೆ ಮಾತು ಹೇಳಿದೆ; ಸ್ವಪ್ನಗಳ ಅಪಮೌಲ್ಯ ಆದಾಗಿನ ಮಾತು... ವಿಚಾರಗಳ ಅಪಮೌಲ್ಯ ಆದಾಗಿನ... ಮಾನವನ ಹಣೆಯ ಮೇಲಿನ ಬೆವರಿನ ಡಿವ್ಯಾಲ್ಯುಯೇಷನ್ ಆದಾಗಿನ ಮಾತು...ಮತ್ತು ಇನ್ನು ಕೆಲವು ವಸ್ತುಗಳದೂ ಅಪಮೌಲ್ಯ— ಪೊಯೆಟ್ರಿಯದು, ಪೇಂಟಿಂಗಿನದು, ಹೂವುಗಳು ಮತ್ತು ಅಧರಗಳ ಉಸಿರುಗಳದು..."

ನತದೃಷ್ಟೆ ಶಿರೀನ್!

ಅವಳು ನನಗೇನಾಗದಿದ್ದರೂ, ನನ್ನ ನೋಯುತ್ತಿರುವ ನರ ಎಂದು ಅನಿಸುತ್ತಿದೆ. ಪ್ರಾಯಶಃ ಅವಳು ನನ್ನಂಥ ಪ್ರತಿಯೊಬ್ಬ ಮನುಷ್ಯನ ನೋಯುತ್ತಿರುವ ನರ...

ಸ್ವಪ್ನಗಳನ್ನು ಮತ್ತು ತಲೆಯಲ್ಲಿ ಬಹಳಷ್ಟು ವಿಚಾರಗಳನ್ನು ತುಂಬಿಕೊಂಡು, ಜೀವನವನ್ನು ಖರೀದಿಸಲು ಹೊರಟಾಗ, ಜೀವನದ ಪೇಟೆಯಲ್ಲಿ ಜೀವನದ ಬೆಲೆಯನ್ನು ಕೇಳಿದಾಗ, ಅವನ ಎದೆಯಲ್ಲಿ ಝಣತ್ಕರಿಸುವ ಎಲ್ಲ ನಾಣ್ಯಗಳು ನಿರರ್ಥಕವಾಗಿ ಹೋಗುತ್ತಿವೆ ಮತ್ತು ಅವನು ಒಂದು ಸಿಗರೇಟು ಸೇದುತ್ತ ಜೀವನದ ಪೇಟೆಯೊಳಗಿಂದ ಬರಿಗೈಯಲ್ಲಿ ಹಿಂತಿರುಗಿದಾಗ ಶೀರೀನ್‌ಳಂಥವಳು ಪ್ರತಿಯೊಂದು ತಿರುವಿನಲ್ಲಿ ನಿಂತು ಹೇಳುತ್ತಿರುವಳು–

"ನಾನು ನಿನಗೆ ಹೇಳಿದ್ದೆ, ಈ ಎಲ್ಲ ನಾಣ್ಯಗಳ ಅಪಮೌಲ್ಯ ಆಗಿಬಿಟ್ಟಿದೆ..." ಎಂದು.

"ಒಮ್ಮೊಮ್ಮೆ ದೊಡ್ಡಪ್ಪನವರ ನೆನಪಾಗುತ್ತದೆ. ತಮ್ಮ ನಾಯಿಗೆ ಹೇಳುತ್ತಿರುತ್ತಾರೆ... ಸಿಟ್‌ಡೌನ್... ಶಟ್‌ಅಪ್... ಸಿಟ್‌ಡೌನ್..."

ಅಂತರಂಗದಲ್ಲಿ ನಾಯಿಯಂತೆ ಬೊಗಳುವವರಲ್ಲದವರು ನಮ್ಮಲ್ಲಿ ಯಾರಿದ್ದಾರೆ? ನಮ್ಮಲ್ಲಿ ಕೂತುಕೊಳ್ಳದೆ ಯಾವಾಗಲೂ ಎದ್ದು ನಿಂತಿರುವವರು ಯಾರಿದ್ದಾರೆ?

ನನಗೆ ವಿಶ್ವಾಸವಿದೆ. ವಿನೋದ ಹುಚ್ಚರ ಮನೆಯಲ್ಲಿ ಸಲಾಕೆಗಳನ್ನು ಹಿಡಿದು ಜೋರಾಗಿ ಜರೂರ್ ಕೂಗುತ್ತಿರಬಹುದು... ತನವೀರ ತನ್ನ ಜೇಲಿನ ಕೋಣೆಗೆ ತಲೆ ಅಪ್ಪಳಿಸಿ ಅಳುತ್ತಿರಬಹುದು... ಅಶೋಕ ಅಗತ್ಯವಾಗಿ ಒಮ್ಮೊಮ್ಮೆ ರಾತ್ರಿ ಸ್ವಪ್ನದಲ್ಲಿ ಪೇಂಟ್ ಮಾಡುತ್ತಿರಬಹುದು... ಶಿರೀನ್... ರಿಕ್ಕೀ...ನಾನು... ಎಲ್ಲರೂ ಮೌನವಾಗಿದ್ದಂತೆ ಕಾಣುತ್ತೇವೆ. ಆದರೆ ನಮ್ಮ ಮೌನವೂ ನಮ್ಮ ನಮ್ಮ ಹೃದಯದಲ್ಲಿ ನಾಯಿಯಂತೆ ಬೊಗಳುವುದಿಲ್ಲವೇ?

ನಾವು ಪ್ರತಿಯೊಂದು ಶಬ್ದವನ್ನು ಆಲಿಸಿ, ಪ್ರತಿಯೊಂದು ನೆರಳನ್ನು ನೋಡಿ ಬೊಗಳುತ್ತೇವೆ. ಯಾರಿಗೆ ಏನು ಹೇಳಬೇಕೆನ್ನುತ್ತೇವೆಯೋ ಏನೋ– ಬಹುಶಃ ಹೇಳಲು ಸ್ವಲ್ಪ ಏನಿತ್ತೊ, ಅದನ್ನು ಯಾರೂ ಆಲಿಸಲಿಲ್ಲವಾದ್ದ

ರಿಂದಲೇ ನಾವೆಲ್ಲರೂ ಬೊಗಳುತ್ತೇವೆ ಮತ್ತು ನಮ್ಮ ಅಂತರಂಗದಲ್ಲಿ ಎದ್ದದ್ದು ಈಗ ಎಲ್ಲಿಂದಾದರೂ ಹೊರಟು ಎಲ್ಲಿಗಾದರೂ ತಲುಪಬೇಕಾಗಿಲ್ಲ ಎಂಬುದು ಈಗ ಗೊತ್ತು. ಆದರೆ ಇದು ಇನ್ನು ಕುಳಿತುಕೊಳ್ಳುವುದಿಲ್ಲ ಮತ್ತು ಜೀವನದ ಪ್ಯಾಟರ್ನ್ ನಮಗೆಲ್ಲರಿಗೂ ಹೇಳುತ್ತದೆ, "ಸಿಟ್ ಡೌನ್...ಶಟ್ ಅಪ್...ಸಿಟ್ ಡೌನ್...ಶ..."

## ಒಂದು ಸಮಾಪ್ತಿ

ನನ್ನ ಹಂಗಾಮಿಯಾಗಿ ನೌಕರಿ ಇತ್ತು... ಆದರ ಅವಧಿ ಮುಗಿದು ಕಾಯಂ ನೌಕರಿ ಹುಡುಕುತ್ತಿದ್ದೇನೆ... ತನವೀರನ ನೌಕರಿಯೂ ಹಂಗಾಮಿಯಾಗಿತ್ತು. ಆತನಿಗೆ ಅದು ಕಾಯಂ ಆಗಿದೆ ಎಂದರೆ, ಆವನಿಗೆ ಅದು ಶಿಕ್ಷೆ ಇಮ್ಮಡಿಯಾಗಿದೆ ಎಂದರ್ಥ.

ಯಾವುದು ಹಂಗಾಮಿ ಆಗಬೇಕಿತ್ತೋ ಅದು ಕಾಯಂ ಆಗಿದೆ; ಯಾವುದು ಕಾಯಂ ಆಗಿರಬೇಕಿತ್ತೋ ಅದು ಹಂಗಾಮಿಯಾಗೇ ಇದೆ.

ನಾನು ಅವಶ್ಯವಿದ್ದುದರಿಂದ ಹೆಚ್ಚು ಪರಿಶ್ರಮ ಪಟ್ಟೆ. ಅಂದರೆ ಆಲ್ಲಾಗುತ್ತಿದ್ದ ಭ್ರಷ್ಟಾಚಾರದ ಬೆನ್ನು ಹತ್ತಿದ್ದೆ. ಅದೇ ನನ್ನ ತಪ್ಪಾಗಿ ನನಗೆ ರಿಲೀವ್ ಆರ್ಡರ್ ಕೊಡಲಾಯಿತು.

ತನವೀರನಿಗೆ ರಿಲೀವ್ ಆರ್ಡರ್ ಬದಲು ಸ್ಟೇ ಆರ್ಡರ್ ಸಿಕ್ಕಿದೆ. ಬುದ್ಧಿಗೇಡಿ, ಜೇಲಿನಲ್ಲಿ ಒಂದು ಕವಿತೆ ಬರೆದು ಹೇಗೋ ಸ್ಮಗಲ್, ಮಾಡಿ ಹೊರಗೆ ವರ್ತಮಾನ ಪತ್ರಿಕೆಗೆ ಕಳುಹಿಸಿದ ಆಚ್ಚಾಯಿತು; ಅವನ ಹೆಸರಿರದೇ ಕೈದಿ ನಂಬರಿತ್ತು–೬೭೮/೯.

ಕವಿತೆ ಓದಿ ಬೆಚ್ಚಿಬಿದ್ದೆ, ನಂಬರು ನೋಡಿಯೂ ಬೆಚ್ಚಿಬಿದ್ದೆ– ಅದು ಗೋರ್ಕಿಯು ಕೈದಿಯಾಗಿದ್ದಾಗಿನ ನಂಬರೆಂದು ನೆನಪಿಸಿಕೊಂಡಿದ್ದೆ...

ಮರುದಿನ ಪತ್ರಿಕೆಯಲ್ಲಿ ನಿಜ ಸುದ್ದಿ ಪ್ರಕಟವಾಗಿತ್ತು. ಅದು ಆತನ ನಿಜವಾದ ನಂಬರೆಂದೂ, ಅದರ ಮೂಲಕ ಅವನ ಹೆಸರನ್ನು ಹುಡುಕಿ ತೆಗೆಯಲಾಗಿತ್ತು. ನಿಜವಾದ ಹೆಸರು ತನವೀರನೆಂದು ಮತ್ತು ಈ ಅಪರಾಧಕ್ಕಾಗಿ ಅವನ ಶಿಕ್ಷೆಯನ್ನು ಇಮ್ಮಡಿಯಾಗಿಸಿದೆ ಎಂದು.

ಪುನಃ ಕವಿತೆಯನ್ನು ಟಿಪ್ಪಣಿ ಸಹಿತ ಓದು... ಆದರೆ ಸಾಲುಗಳಿಂದ ತನವೀರನನ್ನು ಏಕೆ ಗುರುತಿಸಲಿಲ್ಲ ಎಂದು ಯೋಚಿಸುತ್ತಿದ್ದೇನೆ.

ಟಿಪ್ಪಣಿ ಬಹಳ ಸ್ಪಷ್ಟವಿದೆ: "ಇವೊತ್ತು ಜೇಲಿನ ಫೌಜದಾರ ಹೊರಗಿನ ವರಾಂಡದಲ್ಲಿ ಆರಾಮು ತೆಗೆದುಕೊಳ್ಳುತ್ತಿದ್ದ, ಅವನ ಟ್ರಾನ್ಸಿಸ್ಟರ್ ನುಡಿಯುತ್ತಿತ್ತು– 'ಸೈಗಲ್‌ರ ಗೀತ ಕೇಳಿರಿ' ಎಂದು. ಕೇಳುವವಸೈಗಲ್‌ರ ಧ್ವನಿಯಲ್ಲಿ ಮುಳುಗಿರುವಾಗ, 'ನಾವು ತಯಾರಿಸಿದ ಹೊಸ ಸಾಬೂನನ್ನು ಉಪಯೋಗಿಸಿರಿ. ಇದು ಬಹಳ...' ಎಂಬ ಜಾಹೀರಾತೂ ಬರುತ್ತಿತ್ತು. ಆ ಮೇಲೆ ಗಾಲಿಬ್‌ನ ಗಜಲ್, ಟೂಥ್‌ಪೇಸ್ಟಿನ ಜಾಹೀರಾತು ಕೇಳಿ ಬರುತ್ತಿತ್ತು. ನಾನೇನು ಯೋಚಿಸಲು ಅಥವಾ ಹೇಳಲು ಬಯಸುವುದಿಲ್ಲ. ಆದರೆ ನಾನು ಸ್ವತಃಕ್ಕೂ ವಿದ್ರೋಹಿಯಾಗಿ ಒಂದು ಕವಿತೆ ಬರೆದಿದ್ದೇನೆ...

ಟಿಪ್ಪಣಿಯ ಕೆಳಗೆ ಕವಿತೆಯಿದೆ: "ಕಮರ್ಶಿಯಲ್ ಸರ್ವಿಸ್." ನಾನು ಮೌನವಾಗಿದ್ದೇನೆ. ತನವೀರ ಮಾತಾಡುತ್ತಿದ್ದಾನೆ. ನಾನು ಹಿಡಿದಿರುವುದು ಕವಿತೆಯ ಕಾಗದವಲ್ಲ, ಇನ್ನೂ ಹುಟ್ಟದಿರುವ ಟ್ರಾನ್ಸಿಸ್ಟರನ್ನು...

ಟ್ರಾನ್ಸಿಸ್ಟರಿನಿಂದ ಧ್ವನಿ ಬರುತ್ತಿದೆ."ಪೋರ್ಟ್‌ಫೋಲಿಯೋ ವೇವ್ ಮಿನಿಸ್ಟ್ರೀ ಮೀಟರ್ ಪೋರ್ಟ್‌ಫೋಲೀಯೋ ವೇವ್"

"ಹೊಸ ಯೋಜನೆಯ ಮೇಲೆ ಹಾಡಿದ ಹೊಸ ಗೀತೆ ಕೇಳಿರಿ...

"ಒಂದು ಸಾವಿರ ಕಾರ್ಖಾನೆಗಳು...

"ವಿದೇಶಿ ಮಶಿನು ಖರೀದಿಸಿರಿ, ಅವುಗಳ ಪರಮಿಟ್ ನನ್ನ ಮಗನ ಹೆಸರಿನಲ್ಲಿದೆ. ಈಗ ಎಲ್ಲರಿಗೂ ಇಷ್ಟವಾದ ಗೀತ ಕೇಳಿರಿ. ಕೃತಿಯ ಉತ್ಪನ್ನ ಮೂರು ಪಟ್ಟು. ಟ್ರ್ಯಾಕ್ಟರ್ ಖರೀದಿಸಿರಿ. ಆದರ ಬ್ಲ್ಯಾಕ್ ಕೇವಲ ದುಪ್ಪಟ್ಟು ಆಗಿದೆ. ಹೊಸ ಅಧಿವೇಶನದ ಭಾಷಣ ಕೇಳಿರಿ, ನನ್ನ ತಮುಮನ ದೇಶಕ್ಕೆ ಅರ್ಪಣ. ಕೇವಲ ಹಣ ಫಾರಿನ್ ಬ್ಯಾಂಕಿನಲ್ಲಿರುವುದು.

ಈಗ ಕೇಳಿರಿ ಗಾಲಿಬನ್ ಗಜಲಿನ ಹಾಗೆ ಬೇಡಿಕೆ...ಹರತಾಳ...ಪ್ರಕಟಣೆಗಳು...ಈ ಒಂದನೆಯ ತಾರೀಖಿನಿಂದ ಕೇವಲ ಒಂದೂವರೆ ಪಟ್ಟು ಜಾಸ್ತಿ ಟ್ಯಾಕ್ಸ್. ಒಂದು ಆವಶ್ಯಕ ಪ್ರಕಟಣೆ

ಕೇಳಿರಿ: ಇಂದಿನ ಚರ್ಚೆಯ ಅಜಂಡಾ ಇತ್ತು. ಟೋಟಲ್ ಎಜುಕೇಶನ್. ಟೋಟಲ್ ಎಂಪ್ಲಾಯ್‌ಮೆಂಟಿನ ಗೊತ್ತುವಳಿ ಪಾಸಾಗಿದೆ. ಟೋಟಲ್ ಪ್ರೊಹಿಬಿಶನ್ ಕೊನೆಯಲ್ಲಿ ಸುದ್ದಿ ಕೇಳಿರಿ; ಹಾಡಿರಿ, ಹಾಡಿರಿ. ಜೀವಂತ ಇದ್ದವರೇನು, ಸತ್ತವರ ವರ್ಷ ಶ್ರಾದ್ಧ ಮಾಡಿರಿ ಎಂದು ಪ್ರತಿಯೊಂದು ರಾಜ್ಯವೂ ನಿರ್ಣಯಿಸಿದೆ. ಈಗ ಚುನಾವಣೆಯ ಕಾಲ. ನಮಗೆ ಆಜ್ಞಾಪಿಸಿರಿ. ಹೊಸ ಇಲೆಕ್ಷನ್ ನಂತರ ಪುನಃ ನಿಮ್ಮ ಸೇವೆಗೆ ಹಾಜರು..."

ತನವೀರ ನಗುತ್ತಿದ್ದಾನೆ......ಮಾತಾಡುತ್ತಿದ್ದಾನೆ...ಇಲ್ಲ, ನಾಯಿಯ ಹಾಗೆ ಬೊಗಳುತ್ತಿದ್ದಾನೆ...ಐದು ವರ್ಷಗಳ ಬದಲು ಹತ್ತು ವರ್ಷಗಳ ಕಾರಾವಾಸ. ಒಬ್ಬನು ಅವನಿಗಿಂತ ಹೆಚ್ಚು ಹೆಚ್ಚು ಉಚ್ಚ ಸ್ವರದಲ್ಲಿ ಹೇಳುತ್ತಿದ್ದಾನೆ... ಒದರುತ್ತಿದ್ದಾನೆ...'ಸಿಟ್ ಡೌನ್...ಶಟ್ ಅಪ್... ಸಿಟ್ ಡೌನ್...' ಇದರಲ್ಲಿ ಏನೂ ಸಿಂಬಾಲಿಕ್ ಇಲ್ಲ.

ವಿಚಾರಣೆಗಾಗಿ ಕಚೇರಿಯಲ್ಲಿ ತಂದು ನಿಲ್ಲಿಸಿದಾಗ ತನವೀರ ಹೆಮ್ಮೆಯಿಂದ ಹೇಳಿದ್ದ: "ಗೋರ್ಕಿ ಜೇಲಿನಲ್ಲಿ ಕಾದಂಬರಿ ಬರೆದಂತೆ ನಾನೂ ಕವಿತೆ ಬರೆದಿದ್ದೇನೆ. ನನ್ನ ಮತ್ತು ಅವನ ನಂಬರು ಒಂದೇ ಇದೆ...ಲಕೀ ನಂಬರ್."

ಕಚೇರಿಯಲ್ಲಿ ಎಲ್ಲಕ್ಕೂ ಜೋರಾಗಿ ಮೇಜನ್ನು ಅಪ್ಪಳಿಸಿ ಎದ್ದ ಧ್ವನಿ: "ಬಾಯ್ಮುಚ್ಚು ನಾವೆಲ್ಲರೂ ನಾಯಿ ಇದ್ದಂತೆ. ಬೊಗಳುವವನಿಗೆ ವಂದಿಸು."

## ಇನ್ನೊಂದು ಸಮಾಪ್ತಿ

ಎಷ್ಟೋ ದಿನಗಳನಂತರ ಅಕಸ್ಮಾತ್ ಇವೊತ್ತು ಶೀರಿನ್‌ಳಿಂದ ಪತ್ರ ಬಂದಿತು, "ಕಪಿಲ ಬೆಳಿಗ್ಗೆ ಕ್ಲಾಸು ತೆಗೆದುಕೊಳ್ಳುತ್ತಿದ್ದಂತೆ ನನ್ನೊಳಗೊಂದು ಘಟನೆಯಾಯಿತು! ಬೋರ್ಡ್ ಮೇಲಿದ್ದ ಜಗತ್ತಿನ ನಕಾಶೆಯಲ್ಲಿ ಜಗತ್ತಿನ ಎಲ್ಲ ದಾರಿಗಳು ಎದುರಿಗಿದ್ದವು.

"ಈಗ ಎಲ್ಲಿಯೂ ಜೀವಂತ ರಸ್ತೆಯಿಲ್ಲ; ಇಡೀ ಜಗತ್ತಿನ ದಾರಿಗಳಲ್ಲಿ ಶವಗಳು ಹರಡಿವೆ. ಕಪಿಲ, ಯಾರಾದರೂ ಜೀವಂತ ಕಾಲುಗಳಿಂದ ಸತ್ತ ರಸ್ತೆಯ ಮೇಲೆ ಹೇಗೆ ನಡೆಯುವುದು? ಮತ್ತು ನಾನು ಸತ್ತ ರಸ್ತೆಗಗಳಿಂದ ಗಾಬರಿಗೊಂಡು ಅಲ್ಲ, ನನ್ನ ಜೀವಂತ ಕಾಲುಗಳಿಗೆ ಅಂಜಿ ಶಾಲೆಯಿಂದ ರಜೆ ತೆಗೆದುಕೊಂಡು ಮನೆಗೆ ಬಂದೆ...

"ಈಗ ಗಹನ ರಾತ್ರಿ, ನಾನು ಇಡೀ ದಿನ ನನ್ನ ಕಾಲುಗಳ ಕಡೆಗೆ ನೋಡುತ್ತಿರುತ್ತೇನೆ. ಇಡೀ ದಿನ ಯೋಚಿಸುತ್ತಿರುತ್ತೇನೆ—ಈ ನನ್ನ ಕಾಲು ಇಷ್ಟು ಜೀವಂತ ಏಕೆ ಇವೆ ಅಂತ. ಕಾಲು ಜೀವಂತವಿದ್ದರೆ ದಾರಿಯೂ ಜೀವಂತವೇಕಿಲ್ಲ? ದಾರಿ ಸತ್ತಿದ್ದರೆ ಕಾಲು ಏಕೆ ಸಾಯುವುದಿಲ್ಲ?"

ನೆನಪು ಬಂತು. ಒಂದು ದಿನ ರಿಕ್ಕೀ ಅಂದಿದ್ದಳು, 'ವ್ಹಾಯ್ ಆರ್ ಯು ಸೊ ಅಲೈವ್?' ಇವೊತ್ತು ಶಿರೀನ್ ಅನ್ನುತ್ತಿದ್ದಳು, 'ನಾನು ಸತ್ತ ದಾರಿಗೆ ಹೆದರಿಲ್ಲ, ನನ್ನ ಜೀವಂತ ಕಾಲುಗಳಿಗೆ ಹೆದರಿದ್ದೇನೆ!'

ಯಾರ ಕಾಲುಗಳಲ್ಲಿ ಎದೆಯಲ್ಲಿ ತಲೆಯಲ್ಲಿ ಏನು ಜೀವಂತ ಇದೆಯೋ ಅದನ್ನು ಅವರೇನು ಮಾಡಬೇಕು ಎಂದು ಯೋಚಿಸುತ್ತಿದ್ದೇನೆ...! ಈ ಎಲ್ಲ ಪ್ರಶ್ನೆಗಳು ಅದೇ ಜೀವಂತವಿರುವ ಭಾಗದಲ್ಲಿ ಏಳುತ್ತಿವೆ. ಇಲ್ಲದೆ ಹೋದರೆ ಸತ್ತ ಭೂಮಿಯಲ್ಲಿ ಯಾವಾಗ, ಏನು ಹುಟ್ಟೀತು!

ಕೆಲವು ಸ್ವಪ್ನಗಳು ಎಲ್ಲರ ಬಳಿಯೂ ಇದ್ದವು; ಈಗಲೂ ಇವೆ. ಅವು ಅರಣ್ಯದ ಸಭ್ಯ ನಿಷ್ಪಾಪಿ ಹಕ್ಕಿಗಳಂತೆಯೂ ವಿಷಕಾರಿ ಸರ್ಪಗಳಂತೆಯೂ ಇವೆ...

ನಾವು ಈ ಅಡವಿಯ ನಿವಾಸಿಗಳು...ಹಸಿವೆಯಾದಾಗ ಈ ನಿಷ್ಪಾಪಿ ಹಕ್ಕಿಗಳನ್ನು ನಮ್ಮ ಸ್ವಪ್ನಗಳ ಸಲುವಾಗಿ ಹುರಿದು ತಿನ್ನುತ್ತೇವೆ. ಮತ್ತು ನಾವೇ ಸ್ವತಃ ವೇಳೆ—ಆ ವೇಳೆಯಲ್ಲಿ ಈ ಸ್ವಪ್ನಗಳ ಕೈಯಲ್ಲಿ ಸಿಕ್ಕಿಕೊಳ್ಳುತ್ತೇವೆ...

ಒಮ್ಮೊಮ್ಮೆ ಒಂದು 'ಇವತ್ತು' ಹೀಗೂ ಇರುತ್ತದೆ. ಶಿರೀನಳ ಪತ್ರ ಬರುತ್ತದೆ ಮತ್ತು ಆ 'ಇವತ್ತು' 'ನಾಳೆ'ಯಲ್ಲಿ ಸೇರಿಹೋಗುತ್ತದೆ. ಹಾಗೆಯೇ ನಾಡದು, ಆಚೆನಾಡದು ಇತ್ಯಾದಿ... ಹೀಗೆಯೇ ಪ್ರತಿದಿನ ಮರುದಿನವನ್ನು ಕಾಲ ಕೆಳಗೆ ತುಳಿಯುತ್ತ, ಜಗಿಯುತ್ತ ಅದರ ಮುಂದಿನ ದಿನದ ಕಡೆಗೆ ಸಾಗುತ್ತದೆ. ಬಹಳ ದಣಿದು ಬೀಳುವ ವರೆಗೆ ಹೀಗೆ ನಡೆದಿರುತ್ತದೆ...

ಆದ್ದರಿಂದ ಇವೊತ್ತು ವಿನೋದನನ್ನು ಭೆಟ್ಟಿ

ಯಾಗಲಿಕ್ಕೆಂದು. ಇಲ್ಲಿ ಭೆಟ್ಟಿಗಿಂತ ಕಾಣಲಿಕ್ಕೆ ಎನ್ನುವುದು ಹೆಚ್ಚು ಸೂಕ್ತವಾದೀತು. ಏಕೆಂದರೆ 'ಭೆಟ್ಟಿಯ' ಶಬ್ದದಲ್ಲಿ 'ಪರಿಚಯ'ದ ಅರ್ಥವಿದೆ, ಈಗ ವಿನೋದ ಯಾರನ್ನೂ ಗುರುತಿಸುವುದಿಲ್ಲ.

ವಿನೋದ ಯಾರೊಡನೆಯೇ ಆಗಲಿ, ಮಾತಾಡಿದರೆ ಪ್ರತಿಯೊಂದು ವಾಕ್ಯದ ಕೂಡ 'ಅಪರಿಚಿತ' ಶಬ್ದ ಜೋಡಿಸುತ್ತಾನೆ, "ನೋಡಿ ಅಪರಿಚಿತರೆ," ಅವನಿಗೆ ಜಗತ್ತಿನಲ್ಲಿರುವ ಎಲ್ಲ ಶಬ್ದಗಳಿಗಿಂತ ಇದೇ ಹೆಚ್ಚು ಸರಿ ಎನಿಸಿರಬೇಕು. ವಿಚಾರ ಮಾಡುತ್ತೇನೆ. ಬಹಳ ಶಬ್ದಗಳಿದ್ದವು – ಗೆಳೆಯ ಇತ್ಯಾದಿ. ಗೆಳೆಯ ಅಥವಾ ದೋಸ್ತ ಬಹಳ ಪ್ರೀತಿಯ ಶಬ್ದಗಳು. ಆದರೆ ಈ ಶಬ್ದಗಳು ಮನುಷ್ಯನೊಡನೆ ಎಷ್ಟು ದೂರ ಹೊಂದಿಕೊಂಡು ನಡೆಯದಾವು ?

ಮನುಷ್ಯ ನಡೆಯುತ್ತಲೇ ಇದ್ದ. ಈ ಆದರೆ ಶಬ್ದಗಳು ದಣಿದವು……

ವಿನೋದ ಬಹುಶಃ ಸರಿಯಾದುದನ್ನೇ ಹೇಳುತ್ತಾನೆ. ಈ ಅಪರಿಚಿತ ಶಬ್ದ ಎಲ್ಲಕ್ಕಿಂತ ಶಕ್ತಿಶಾಲಿ. ಮನುಷ್ಯನ ವಂಶ ಸುರುವಾಗಿನಿಂದ ಇದೇ ಶಬ್ದ ಅವನ ಜೊತೆ ನಡೆದುಬಂದಿದೆ. ಇಂದಿಗೂ ಬರುತ್ತಿದೆ…

ಈ ಶಬ್ದದ ಬೇರುಗಳು ಭೂಮಿಯಲ್ಲಿ ಎಷ್ಟು ಆಳ ಹೋಗಿವೆಯೋ ಏನೋ. ಬಹುಶಃ ಮನುಷ್ಯನ ಹೃದಯದಲ್ಲಿ ಪ್ರಶ್ನೆಗಳ ಯಾವ ಅರಣ್ಯ ಹುಟ್ಟುತ್ತದೆಯೋ ಆ ಅರಣ್ಯದ ಎಲ್ಲಕ್ಕೂ ಹಳೆಯ ಮರ ಈ ಶಬ್ದ……

ವಿನೋದನೂ ಸ್ವಪ್ನಗಳನ್ನು ಕಂಡಿದ್ದ. ಆದರೆ ಆ ಪಂಡುಕ ಮತ್ತು ಗಿಟಾರಗಳಂಥ ಸ್ವಪ್ನಗಳೂ ಸಮಯ ಸಾಧಿಸಿ ಪ್ರಶ್ನೆಗಳ ಅರಣ್ಯದಲ್ಲಿ ಸರ್ಪವಾಗಿ ವಿನೋದದನನ್ನು ಕಚ್ಚಿದ್ದವು. ಆ ವಿಷದಿಂದಲೆ ಇಂದು ವಿನೋದ ಹುಚ್ಚರಾಸ್ಪತ್ರೆಯಲ್ಲಿದ್ದಾನೆ.

ನಾನು ಮಾತಾಡಲೆತ್ನಿಸಿದರೂ ಆತ ಮೌನವಾಗಿ ಸಲಾಕೆಗಳ ಹಿಂದೆ ಗೋಡೆಗಾತು ನಿಂತಿದ್ದ. ಆಗ ನನಗವನ ಕಲಾ ಪ್ರದರ್ಶನ ನೆನಪಿಗೆ ಬಂತು.

ಅವನನ್ನು ಅಂದು ಸೆಲ್ಫ್ ಪೊರ್ಟ್ರೇಟ್ ಬಗ್ಗೆ ಕೇಳಿದ್ದಕ್ಕೆ ಅದು ಕೊನೆಯ ಐಟಮ್ ಎಂದಿದ್ದ. ಅಯ್ಯೋ ದೇವರೆ! ಇಂದು ಗೋಡೆಗಾತು ನಿಂತ ವಿನೋದ ತನ್ನ ಜೀವಂತ ಸತ್ತ ಚಿತ್ರವನ್ನು ತೂಗು ಹಾಕಿದ್ದ.

ನಾನು ಹುಚ್ಚನಂತೆ ಕೇಳುತ್ತಲೇ ಇದ್ದೆ ಅವನನ್ನು. ಕೊನೆಯ ಐಟಮ್ಮಿನ ಮುಂಚೆ ಅತ್ಯಂತ ಅಗತ್ಯದ ಐಟಮ್ ಪೊರ್ಟ್ರೇಟ್ ಆಫ್ ಆ್ಯನ್ ಈಡಿಯಟ್ ಕ್ರೀಚರ್; ಪೊರ್ಟ್ರೇಟ್ ಆಫ್ ಆ್ಯನ್ ಈಡಿಯಟ್ ಸಿಸ್ಟಮ್ ಇದೆ ಎಂದಿದ್ದೆ. ಅದು ಎಲ್ಲಿದೆ ?"

ನನ್ನ ತಳಮಳ ನೋಡಿ ವಿನೋದ ಸುಮ್ಮನಿದ್ದ… ಶೂನ್ಯ ನೋಡುತ್ತ, "ನೋಡು ಅಪರಿಚಿತಾ ನಾನೊಂದು ಕವಿತೆ ಬರೆದಿದ್ದೇನೆ. ನೀನು ಆಲಿಸುವಿಯಾ?"

"ಸೂರ್ಯ ಚಿನ್ನದ ಬಟ್ಟಲಾಗಿದ್ದ
ಚಂದ್ರ ಬೆಳ್ಳಿಯ ಬಟ್ಟಲ
ಮತ್ತು ಭೂಮಿ ಮಣ್ಣಿನ ಒಂದು
ಹಸಿರು ಪಾತ್ರೆ.
ಅವರ ಸಭ್ಯತೆಗೆ ಚಿರಕಾಲದಿಂದ ಕ್ಷಯ
ರೋಗ ಮತ್ತು ಎದುರಿಗೆ ಬಂದದ್ದೆಲ್ಲ
ಅದು ಪೀಕದಾನಿಯೆಂದು ತಿಳಿದು
ಕೊಳ್ಳುತ್ತಿದೆ.
ಮತ್ತು ಚಿನ್ನದ ಬಟ್ಟಲಲ್ಲಿ ಅದು
ರಕ್ತವನ್ನುಗುಳುತ್ತದೆ
ಬೆಳ್ಳಿಯ ಬಟ್ಟಲಲ್ಲಿ ಅದು ರಕ್ತವನ್ನು
ಉಗುಳುತ್ತದೆ. ಮತ್ತು ಪ್ರತಿಯೊಂದು
ಪುಷ್ಪ ಪಾತ್ರದಲ್ಲೂ ಅದು ರಕ್ತವನ್ನು
ಗುಳುತ್ತದೆ'

## ಮತ್ತೂ ಒಂದು ಸಮಾಪ್ತಿ

ಅಳು ನಿಲ್ಲುತ್ತಿದ್ದಿಲ್ಲ…ಆದ್ದರಿಂದ ಅಲ್ಲಿಂದ ಬೇಗ ಓಡಿ ಬಂದಿದ್ದೇನೆ……

ವಿನೋದನ ಬಳಿಯಿಂದೇನೊ ಬಂದಿದ್ದೆ; ಆದರೆ ನನ್ನ ಬಳಿಯಿಂದ ನಾನೆಲ್ಲಿಗೆ ಹೋಗಲಿ? ಎಲ್ಲಿಗೂ ಹೋಗಲಾರೆ…ನಾನು ನಿಂತಿದ್ದೇನೆ… ಭೂಮಿ ತಿರುಗುತ್ತಿದೆ…ನಾನು ನಿಂತಿದ್ದೇನೆ…

ಪ್ರಶ್ನೆಗಳ ಅರಣ್ಯ ಮತ್ತಷ್ಟು ದಟ್ಟವಾಗಿದೆ. ಎಷ್ಟು ಅಂತರ, ಎಲ್ಲ ಪರಿಚಿತ ಮುಖಗಳು ಈ ಅರಣ್ಯದಲ್ಲಿ ಕಳೆದುಹೋಗಿವೆ…

ದೂರದಲ್ಲಿ ಎಲ್ಲಿಯೂ ಪ್ರಶ್ನೆಯಿಲ್ಲಿದಿದ್ದಲ್ಲಿ ಎಲ್ಲಿಯೂ ಆರಣ್ಯವಿಲ್ಲದಲ್ಲಿ ಜನರು ವಾಸಿಸುತ್ತಾರೆ; ಅಪರಿಚಿತರು ವಾಸಿಸುತ್ತಾರೆ.

ಅಪರಿಚಿತರು ಎಂದೂ ಇತ್ತ ಬರುವುದಿಲ್ಲ. ಕೇವಲ ಸಮಯ ಯಾವಾಗ ಇತ್ತ ಕಡೆಯಿಂದ ಹೋಗುತ್ತಿದೆಯೊ ಆಗ ಅಡವಿಯ ಕಡೆಗೆ ನೋಡುತ್ತಾರೆ. ಅದಕ್ಕೆ ಗೊತ್ತು ಕೆಲವರು ಇಲ್ಲಿ ಬರುತ್ತಾರೆ ಅಂತ.

ನನಗೆ ಹೊತ್ತು ಅಪರಿಚಿತ. ಅದನ್ನು ನೋಡಿ ನಾನು ನಾಯಿಯಂತೆ ಬೊಗಳಿದರೆ ಅದು ಜೋರಾಗಿ ಕೂಗುತ್ತದೆ: "ಶಟ್ ಅಪ್......ಸಿಟ್ ಡೌನ್......"

ಕೂಡಲೇ ಈ ಪ್ರಶ್ನೆಗಳ ಕಾಡಿನಿಂದ ದೂರ ಹೊರಟು ಹೋಗುತ್ತದೆ... ನಾನು ಸುಮ್ಮ ಸುಮ್ಮನೆ ಶೂನ್ಯದಲ್ಲಿ ಬೊಗಳುತ್ತಿರುತ್ತೇನೆ... ಹೊತ್ತಿಗೆ ಬಹುಶಃ ಗೊತ್ತಿಲ್ಲ; ಏನೆಂದರೆ ನಾನು, ನನ್ನಂತೆ ಬೊಗಳುವವರೆಲ್ಲರೂ ಅರಿತು ಕೊಂಡಿದ್ದೇವೆ – ನಮ್ಮ ಅಧಿಕಾರ ನಮಗೆ ಕೊಡ ಬೇಕಾದುದನ್ನು ನಮ್ಮಿಂದ ಅಡಗಿಸಿ ತನ್ನ ಕಿಸೆಯಲ್ಲಿ ಹಾಕಿಕೊಂಡಿದೆಯೆಂಬುದನ್ನು.

ನಾವು ನಿರುಪಾಯರು. ಅದರ ದೆಸೆಯಿಂದ ನಮ್ಮದಿದ್ದುದನ್ನು ನಾವು ಕಸಿದುಕೊಳ್ಳಲಾರೆವು. ಹಾಗೆಂದೇ ನಾವು ಕೇವಲ ಬೊಗಳುತ್ತಿರುತ್ತೇವೆ...

ಆದರೆ ಎಷ್ಟು ಹೊತ್ತು ?

ಇವೊತ್ತು ಜೋರಾಗಿ ನಗಬೇಕೆನಿಸುತ್ತಿದೆ. ಒಂದು ದೊಡ್ಡ ಭಯಂಕರ ಮಾತನ್ನು ಹೇಳ ಬೇಕೆನಿಸುತ್ತಿದೆ, ಅದೇನೆಂದರೆ ನಾವು ಒಂದು ದಿನ ಆಕಸ್ಮಾತ್ತಾಗಿ ಸುಮ್ಮನಾಗುವೆವು. ಇನಿತೂ ಬೊಗ ಳುವುದಿಲ್ಲ; ಆದರೆ ನಮ್ಮ ಮೌನ ಮಾತ್ರ ಬಹಳ ಭಯಂಕರವಾಗುವುದು......ನಾವು ನಮ್ಮ ಧ್ವನಿ ಯನ್ನು ನಮ್ಮ ಕಂಠದೊಳಗಿಂದ ಹೊರತೆಗೆದು ನಮ್ಮ ಕೈಗಳಲ್ಲಿ ಹಿಡಿದುಕೊಳ್ಳುವೆವು. ಧ್ವನಿಯನ್ನು ಒಂದು ಕತ್ತರಿಯನ್ನಾಗಿ ಮಾಡುವೆವು. ಆಮೇಲೆ ಒಂದು ದಿನ ಹೊತ್ತಿನ ಜೇಬನ್ನು ಕತ್ತರಿಸಿಕೊ ಳ್ಳುವೆವು.

ಈಗ, ಈಗಲೇ ನಿಜವಾಗಿಯೂ ಏನೋ ಆಗುತ್ತಲಿದೆ... ಹೇಳಲಿಕ್ಕಾಗುವುದಿಲ್ಲ... ನಿಜವಾ ಗಿಯೂ ನನ್ನ ಕಂಠದಲ್ಲಿ ಒಂದು ಬಗೆಯ ಶೈಥಿಲ್ಯ ವುಂಟಾಗುತ್ತಲಿದೆ ಕೈಯಲ್ಲಿ ಒಂದು ತರಹದ ತುರಿಕೆ...ಚುರುಚುರು..." ●



**ಶರೀರದಿಂದ ಹೊರಹೊಮ್ಮುವ ಬೆವರಿನಲ್ಲಿ ಇರುವ ಅನೇಕ ರಾಸಾಯನಿಕಗಳಲ್ಲಿ ಆ್ಯಂಡ್ರೋಸ್ಟೆನಾಲ್ ಎಂಬುದೂ ಒಂದು. ಇದು ಸ್ತ್ರೀ–ಪುರುಷರಿಬ್ಬರಲ್ಲಿಯೂ ಕಂಡು ಬರುವುದಾದರೂ ಕಾಮಪ್ರಚೋದಕವಾದ ಇದರ ಪ್ರಮಾಣ ಸ್ತ್ರೀಯರಲ್ಲೇ ಹೆಚ್ಚು ಎಂದು ಲಂಡನ್ನಿನ ನರಶಾಸ್ತ್ರ ಸಂಶೋಧನಾಲಯದ ಬ್ರೂಕ್‌ಬ್ಯಾಂಕ್ ಹಾಗೂ ಕಿಂಗ್ಸ್‌ಬರಿ ಎಂಬ ವಿಜ್ಞಾನಿಗಳು ಹೇಳುತ್ತಾರೆ. ಕಾಲೇಜು ಹುಡುಗರು ಹುಡುಗಿಯರನ್ನು ಚುಡಾಯಿಸುವುದಕ್ಕೆ ಇದೂ ಒಂದು ಕಾರಣವಾಗಿರ ಬಹುದೆ?**

Printed & published
Loka Shiksha[illegible] by A. R. Kulkarni on behalf of Administrator,
Road, Hub[illegible] Trust, at Samyukta Karnataka Press, Koppikar
Calcutta : [illegible] 30 020- Rept : Bombay : V. Satyamurthy Phone : 5224121
Phone : 842[illegible] Majumdar Phone: 46-4233; Madras : K. A. Subramanian
[illegible]; New Delhi : P. R. Chopra Phone : 714130

KASTURI PRICE: 2-50 Regd. No. KRNG 4
*Registered with the Registrar of Newspapers for India under No. 3533/5*

# ಒಂದು ದಶಕದ ಹಿಂದೆ ನಾವು ಬಿಸ್ಕತ್ ತಯಾರಿಸಲು ನಿರ್ಧರಿಸಿದೆವು.

## ಅದು ನಮ್ಮ ಆಯ್ಕೆ.



ಶ್ರೇಷ್ಠ ಬಿಸ್ಕತ್‌ಗಳನ್ನು ತಯಾರಿಸಬೇಕೆಂಬುದೇ ನಮ್ಮ ಆಯ್ಕೆ ಹಾಗೂ ನಿರ್ಧಾರವಾಗಿತ್ತು. ಇದಕ್ಕಾಗಿ ನಾವು ಉತ್ಕೃಷ್ಟ ಯಂತ್ರೋಪಕರಣ ಹಾಗೂ ವೃತ್ತಿ ನೈಪುಣ್ಯತೆಗೆ ಆದ್ಯ ಗಮನ ಕೊಟ್ಟೆವು.

ಆದ್ದರಿಂದ. ಹತ್ತು ವರ್ಷದ ಹಿಂದೆ ವಿಶ್ವಪರ್ಯಟನ ಮಾಡಿ ಬಿಸ್ಕತ್ ತಯಾರಿಕೆಯಲ್ಲಿ ನೂರು ವರ್ಷಗಳ ಅನುಭವ ಹಾಗೂ ಪ್ರಾವೀಣ್ಯತೆಯನ್ನು ಪಡೆದಿರುವ ಹಾಲೆಂಡಿನ "ಲೀಗಾ ಬಿಸ್ಕತ್" ಕಂಪನಿಯೊಂದಿಗೆ ಬಾಂಧವ್ಯ ಬೆಳೆಸಿಕೊಂಡೆವು.

ಕಳೆದ ಒಂದು ದಶಕದಿಂದ ಬಿಸ್ಕತ್ ತಯಾರಿಕೆಯಲ್ಲಿ ತೊಡಗಿರುವ ನಾವು ಶ್ರೇಷ್ಠ ಬಿಸ್ಕತ್ ತಯಾರಿಸಲು ಸಿದ್ಧರಾಗಿದ್ದೇವೆ ನಿಮ್ಮ ಆರೋಗ್ಯ ಹಾಗೂ ಪೌಷ್ಟಿಕತೆಗಾಗಿ ಕ್ವಾಲಿಟಿ ಬಿಸ್ಕತ್ತುಗಳು.







ಕ್ವಾಲಿಟಿ

## ಕ್ವಾಲಿಟೀಸ್